# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಕೆಲಸವೇನೂ ಮಾಡಬೇಕಾದ ಅಗತ್ಯವಿಲ್ಲದ ಕೆಲವು ದೊಡ್ಡವರಿಗೆ ಕರ್ತವ್ಯಗಳಿದ್ದರೂ ಅವರನ್ನು ಎಚ್ಚರಿಸುವ ಧೈರ್ಯ ಆಶ್ರಿತರಿಗೆ ಬರಲಾರದು. ಆಗ ಸುಖವಾಗಿ ಸುಮ್ಮನಿರುವವರ ಮನಸ್ಸು ಮಾತ್ರ ಸುಮ್ಮನಿರದೆ ಏನೋ ಒಂದು ಆಲೋಚಿಸಿಕೊಂಡಿರುತ್ತದೆ. ಯಾವುದೋ ಬೇಡದ ಕೆಲಸಕ್ಕೆ ಸಿದ್ಧರಾಗುತ್ತಾರೆ. ಹೀಗೆ ಕಾಲವನ್ನು ವ್ಯರ್ಥಗೊಳಿಸುವವರನ್ನು ತಿದ್ದಲು ಧೈರ್ಯಶಾಲಿಗಳೂ, ಬುದ್ಧಿವಂತರೂ ಆದವರಿಂದಲೇ ಸಾಧ್ಯ. ಅಂತಹ "ಬುದ್ಧಿವಂತ ಕುಂದಣ" ನನ್ನು ಈ ಸಂಚಿಕೆಯಲ್ಲಿ ನೋಡಿರಿ.

## ಅಮರವಾಣಿ

**ನರತ್ವಂ ದುರ್ಲಭಂ ಲೋಕೇ ವಿದ್ಯಾ ತತ್ರ ಸುದುರ್ಲಭಾ**
**ವಿವೇಕೋ ದುರ್ಲಭ ಸ್ತತ್ರ ದಾತೃತ್ವಂ ಚ ವಿಶೇಷತಃ**

ಮಾನವ ಜನ್ಮವೇ ದುರ್ಲಭವೆನ್ನುವರು. ಅದರಲ್ಲಿ ವಿದ್ಯಾವಂತನಾಗುವುದು ಇನ್ನೂ ದುರ್ಲಭ. ವಿವೇಕವಂತನಾಗುವುದು ಅದಕ್ಕಿಂತ ಹೆಚ್ಚು ದುರ್ಲಭ. ಇನ್ನು ದಾತೃತ್ವವೂ ಕೂಡಿದವನು ಎಲ್ಲಕ್ಕಿಂತಲೂ ಹೆಚ್ಚು ದುರ್ಲಭ.

---

ಸಂಪುಟ : ೭೫ ಜುಲೈ '೮೫ ಸಂಚಿಕೆ : ೧

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦






# ಚಂದಮಾಮನ ಹರಟೆ



## ಚಂದ್ರನಲ್ಲಿ ಮಯಣದಬತ್ತಿ ನೋಡಬಲ್ಲೆವೇ ?

ಚಂದ್ರನಿರುವಷ್ಟು ದೂರದಲ್ಲಿ ಮಯಣಬತ್ತಿಯ ಬೆಳಕಿನಂತಿರುವ ಚಿಕ್ಕ ಕಾಂತಿಯನ್ನು ಭೂಮಿಯಿಂದ ನೋಡಲು ಸಾಧ್ಯವೆ ? ೧೯೮೩ ನೇ ಸಂವತ್ಸರದ ಕಾಲಕ್ಕೆ ಅದು ಸಾಧ್ಯವೆಂದು ಖಗೋಳ ಶಾಸ್ತ್ರಜ್ಞರು ಹೇಳುವರು. ಕಾಲಿಫೋರ್ನಿಯಾಕ್ಕೆ ಸೇರಿದ ಖಗೋಳ ಶಾಸ್ತ್ರಜ್ಞರು ಇದಕ್ಕಾಗಿ ಪಾಲಿಮಾರ್ ಬೆಟ್ಟದ ಮೇಲೆ ಪ್ರತ್ಯೇಕವಾಗಿ ಒಂದು ಟೆಲಿಸ್ಕೋಪ್ ರೂಪಿಸುತ್ತಿದ್ದಾರೆ. ಭೂಮಿಯಿಂದ ಹನ್ನೆರಡು ಲಕ್ಷ ಕೋಟಿ ಕಾಂತಿ ಸಂವತ್ಸರಗಳ ಆಚೆಗಿರುವ ವಸ್ತುಗಳನ್ನು ಕೂಡಾ ಈ ಟೆಲಿಸ್ಕೋಪ್ ಮೂಲಕ ನೋಡಬಹುದು !

## ತಿಮಿಂಗಿಲಗಳ ಸಂಗೀತ ಅಭಿಮಾನ !

ಅಲಾಸ್ಕಾಕ್ಕೂ ಸೋವಿಯೆತ್ ರಷ್ಯಾಕ್ಕೂ ಮಧ್ಯದ ಸಮುದ್ರ ಪ್ರಾಂತ್ಯದಲ್ಲಿ ಒಂದು ಕಡೆ ನೀರೂ ಗಡ್ಡೆಕಟ್ಟಿ ಹೋದುದರಿಂದ, ಅವುಗಳ ನಡುವೆ ಸುಮಾರು ಸಾವಿರ ತಿಮಿಂಗಿಲಗಳು ಸಿಕ್ಕಿಕೊಂಡುವು. ಸೋವಿಯೆತ್ ನಾವಿಕಾದಳದವರು ಒಂದು ಕಾಲುವೆ ತೋಡಿದರೂ ಬೆದರಿ ಹೋದ ತಿಮಿಂಗಿಲಗಳು ಅಲ್ಲಿಂದ ಹೊರಗೆ ಬರಲಾರದೆ ಹೋದುವು. ಎಷ್ಟೋ ಪ್ರಯತ್ನಗಳನ್ನು ಮಾಡಿ, ಕೊನೆಗೆ ಸಂಗೀತವನ್ನು ಹೊರಡಿಸಿದಾಗ ತಿಮಿಂಗಿಲಗಳು ಕಾಲುವೆಯ ಮೂಲಕ ಹೊರಗೆ ಬಂದು ಸಮುದ್ರ ಜಲದಲ್ಲಿ ಸೇರಿಕೊಂಡುವು.





## ಗ್ರಹಾಂತರವಾಸಿಗಳಿಗೆ ಸ್ವಾಗತ ಸನ್ನಾಹ !

ಗ್ರಹಾಂತರದಿಂದ ಯಾರಾದರೂ ಬಂದರೆ ಭೂಮಿಯ ಮೇಲೆ ಎಲ್ಲಿ ಇಳಿಯುತ್ತಾರೆ ? ಮೆಕ್ಸಿಕನ್ ನಗರಕ್ಕೆ ಎಂಬತ್ತು ಮೈಲು ದೂರದಲ್ಲಿರುವ ಓರಿಯಂಟಲ್ ಪರ್ವತಗಳ ಮೇಲೆ ಇಳಿಯುವರೆಂದು ಭಾವಿಸಿ, ಅವರನ್ನು ಅಲ್ಲಿ ಸ್ವಾಗತ ಮಾಡಿಕೊಳ್ಳಲಿಕ್ಕಾಗಿ ಅಂಟಾನಿಯೋ ವಾಜ್ ಕ್ವೆಜ್ ಅಲ್ವಾ ಎಂಬ ದೊಡ್ಡ ಮನುಷ್ಯನು ವಿಮಾನಾಶ್ರಯ ಸ್ಥಾನ ರೂಪಿಸುತ್ತಿದ್ದಾನೆ !

## ನಿಮಗೆ ಗೊತ್ತೇ ?

೧. ಭೂಗೋಳದಲ್ಲಿ ಎಷ್ಟನೇ ಅಂಶ ಪ್ರಾಂತವು ಜಲಮಯವಾಗಿದೆ ಎಂದು ನಿಮಗೆ ಗೊತ್ತೇ ?

೨. ಸೂರ್ಯನಿಗೆ ಸಮೀಪದಲ್ಲಿರುವ ಗ್ರಹವು ಯಾವುದು ?

೩. ಗ್ರಹಗಳೊಳಗೆ ತಣ್ಣಗಿನ ಗ್ರಹವು ಯಾವುದೆಂದು ತಿಳಿದಿದೆಯೋ ?

೪. ಗ್ರಹಗಳೊಳಗೆಲ್ಲಾ ದೊಡ್ಡ ಗ್ರಹವು ಯಾವುದೆಂದು ನಿಮಗೆ ಗೊತ್ತಿದೆಯೆ ?

೫. ಭೂಗೋಳದ ಅಡ್ಡಳತೆ (ವ್ಯಾಸರೇಖೆ) ಎಷ್ಟೆಂದು ನೀವು ಅರಿತಿದ್ದೀರಾ ?

(ಉತ್ತರ ೬೪ ನೇ ಪುಟದಲ್ಲಿ)



# ಬುದ್ಧಿವಂತ ಕುಂದಣ

ವಿಜಯಪುರಿಯ ಮಹಾರಾಜನಾದ ಚಂದ್ರಸೇನನು, ಒಂದು ದಿನ ಮಹಾರಾಣಿಯೊಂದಿಗೆ ಅಂತಃಪುರದಲ್ಲಿ ಕುಳಿತುಕೊಂಡು ತಮ್ಮ ಕುಮಾರನ ವಿದ್ಯಾಭ್ಯಾಸವನ್ನು ಕುರಿತು ಮಾತಾಡಿಕೊಳ್ಳುತ್ತಿದ್ದನು. ಆಗ ಹೇಗೆ ಬಂದಿತೋ ಏನೋ, ಒಂದು ಕಾಗೆ ಗವಾಕ್ಷದಿಂದ ಒಳಗೆ ಬಂದು ಬಿಟ್ಟಿತು. ಕೂಡಲೇ ದಾಸಿಯರು ಅದನ್ನು ಹೆದರಿಸಿ ಹಾಗೂ ಹೀಗೂ ಹೊರಗೆ ಓಡಿಸಿಬಿಟ್ಟರು. ಆಗ ಆ ಕಾಗೆಯನ್ನು ನೋಡಿದ ಕೂಡಲೇ ರೋಸಿಕೊಂಡ ರಾಜನಿಗೆ ಏನೋ ಒಂದು ಮಾಡಬೇಕೆಂಬ ವಿಚಿತ್ರವಾದ ಆಲೋಚನೆ ಬಂದು ಬಿಟ್ಟಿತು.

ಕೂಡಲೇ ರಾಜನು ಮಂತ್ರಿಯನ್ನು ಬರಮಾಡಿಸಿ, ಅವನನ್ನು ನೋಡಿ, "ಈ ಕಾಗೆಗಳನ್ನು ಸುಮ್ಮನೆ ಬಿಡಬಾರದು. ಮೊದಲು ಒಂದು ವಿಷಯ ಗೊತ್ತಾಗಬೇಕು. ನಮ್ಮ ವಿಜಯಪುರಿ ರಾಜ್ಯದಲ್ಲಿ ಎಷ್ಟು ಕಾಗೆಗಳಿವೆ ಎಂದು ಸ್ವಲ್ಪವೂ ತಪ್ಪಿಲ್ಲದೆ ಲೆಕ್ಕ ಮಾಡಿ ಹೇಳುವಂಥವನಿಗೆ ಒಳ್ಳೆಯ ಬಹುಮಾನ ಕೊಡೋಣ, ಆದರೆ ಹೇಳುತ್ತೇನೆಂದು ಬಂದು ಸರಿಯಾಗಿ ಹೇಳಲಾಗದೆ ಹೋದವನಿಗೆ ಇಪ್ಪತ್ತು ಕೊರಡೇ ಏಟುಗಳ ಶಿಕ್ಷೆಯನ್ನೂ ಕೊಡಬೇಕು. ಬಹುಬೇಗನೆ ಈ ಸಂಗತಿ ರಾಜ್ಯದೊಳಗೆಲ್ಲಾ ತಿಳಿಯುವಂತೆ ಡಂಗುರ ಸಾರಿಸಿಬಿಡಿರಿ" ಎಂದು ಅಪ್ಪಣೆ ಮಾಡಿದನು.

ಮಂತ್ರಿ ಅದೇ ವಿಧವಾಗಿ ರಾಜ್ಯದೊಳಗೆಲ್ಲಾ ಡಂಗುರ ಹಾಕಿಸಿದನು. ಆದರೆ ದಿನಗಳು ಕಳೆಯುತ್ತಿದ್ದುವೇ ಹೊರತು, ಈ ವಿಚಿತ್ರ ಪ್ರಶ್ನೆಗೆ ಉತ್ತರ ಹೇಳುವೆನೆಂದು ಯಾರೂ ಮುಂದೆ ಬರಲಿಲ್ಲ. ರಾಜನಿಗೆ ಚಿಂತೆ ತಪ್ಪಲಿಲ್ಲ.

ಕಡೆಗೆ ಕುಂದಣನೆಂಬ ಯುವಕನೊಬ್ಬನು, ತನ್ನ ವಿದ್ಯಾಭ್ಯಾಸ ಮುಗಿಸಿಕೊಂಡು. ಏನಾದರೂ ಉದ್ಯೋಗ ದೊರೆಯುವುದೇನೋ ನೋಡಲು ರಾಜಧಾನಿಗೆ ಬಂದು, ಈ ವಿಚಿತ್ರ ಸಂಗತಿಯನ್ನು ಕೇಳಿದನು. ಅವನಿಗೆ ಆಶ್ಚರ್ಯವಾದುದಷ್ಟೇ ಅಲ್ಲದೆ, ರಾಜನಾದ ಚಂದ್ರಸೇನನ ಪರಿಪಾಲನೆಯ ಸಾಮರ್ಥ್ಯದಲ್ಲಿ ಅನುಮಾನವೂ ಬಂದಿತು. ರಾಜನನ್ನೇ ನೋಡಿ ಅದನ್ನು ಪರಿಹರಿಸಿಕೊಳ್ಳಲು ನಿಶ್ಚಯಿಸಿದನು.

ಅವನು ರಾಜನ ಸಭೆಯೊಳಗೆ ಪ್ರವೇಶಿಸಿ, ರಾಜನಿಗೆ ನಮಸ್ಕಾರ ಮಾಡಿ, "ಮಹಾ ಪ್ರಭೂ,

ಕೆ. ಜಮಾ



ನಾನು ಓದಿಕೊಂಡವನಾದರೂ ನಿರುದ್ಯೋಗಿಯಾಗಿರುವವನು. ಏನೋ ಒಂದು ಉದ್ಯೋಗ ದೊರಕಿಸಿಕೊಳ್ಳಬೇಕೆಂದು ಈ ವಿಜಯಪುರಿ ರಾಜ್ಯದ ಹಳ್ಳಿ ಪಟ್ಟಣಗಳನ್ನಷ್ಟೇ ಅಲ್ಲದೆ ಮೂಲೆ ಮುಡುಕಿನಲ್ಲಿರುವ ಕುಗ್ರಾಮಗಳನ್ನೂ ಸುತ್ತಾಡಿ ನೋಡಿದ್ದೇನೆ. ಆ ಕಾರಣದಿಂದ ನನಗೆ ನಮ್ಮ ರಾಜ್ಯದೊಳಗೆ ಬರೇ ಕಾಗೆಗಳು ಮಾತ್ರವಲ್ಲ, ಕೊಕ್ಕರೆಗಳು, ಹದ್ದುಗಳು, ಗಿಳಿಗಳು, ಗಿಡಗಗಳು, ಗುಬ್ಬಿಗಳು ಎಷ್ಟೆಷ್ಟು ಇವೆ ಎಂಬುದೆಲ್ಲಾ ಸ್ಪಷ್ಟವಾಗಿ ಗೊತ್ತಿದೆ. ಸಮಯಕ್ಕೆ ಉಪಯೋಗವಾದೀತೆಂದು ಅವುಗಳನ್ನೆಲ್ಲಾ ಗುರುತಿಸಿಕೊಂಡಿದ್ದೇನೆ. ಆದರೆ ಗೂಗೆಗಳ ಲೆಕ್ಕವನ್ನು ಮಾತ್ರ ಹೇಳಲು ನನ್ನಿಂದಾಗದು. ಅವು ರಾತ್ರಿಯಲ್ಲಿ ತಿರುಗುವಂಥವು ತಾನೇ ? " ಎಂದನು.

ಆ ಮಾತುಗಳನ್ನು ಕೇಳಿ ಚಂದ್ರಸೇನ ರಾಜನು ಸಣ್ಣಗೆ ನಕ್ಕು, "ನೀನು ಹೇಳುವುದು ನಿಜವಾದರೆ ನಿನಗೆ ಪಕ್ಷಿಗಳ ಮೇಲಿರುವ ಆಸಕ್ತಿಯನ್ನು ಮೆಚ್ಚಲೇಬೇಕು. ಆದರೆ ಮುಖ್ಯವಾದೊಂದು ಸಂಘಟನೆಯ ಕಾರಣದಿಂದ ನಾನು ರಾಜ್ಯದೊಳಗಿನ ಕಾಗೆಗಳ ಸಂಖ್ಯೆ ಮಾತ್ರವೇ ತಿಳಿಯಲು ಬಯಸುತ್ತೇನೆ" ಎಂದನು.

"ಅದನ್ನು ನಾನು ಹೇಳಬಲ್ಲೆನು ಪ್ರಭೂ" ಎಂದನು ಕುಂದಣ.

"ಅದು ಸರಿ, ಆದರೆ ಮತ್ತೊಂದು ಸಂಗತಿ ಗೊತ್ತಿದೆಯಷ್ಟೆ ? ಸರಿಯಾಗಿ ತಿಳಿಸದೆ ಹೋದರೆ ಇಪ್ಪತ್ತು ಕೊರಡೇ ಏಟು ತಿನ್ನಲೂ ಸಿದ್ಧನಾಗಿರಬೇಕು" ಎಂದನು ರಾಜ.

"ಅದನ್ನೂ ಅರಿತಿದ್ದೇನೆ ಪ್ರಭುಗಳೇ. ನಮ್ಮ ವಿಜಯಪುರಿ ರಾಜ್ಯದಲ್ಲಿ ಈ ಕ್ಷಣದವರೆಗೆ ಇರುವ ಕಾಗೆಗಳು ಮೂರು ಲಕ್ಷದ ಇಪ್ಪತ್ತು ಸಾವಿರಗಳು" ಎಂದನು ಕುಂದಣ.

"ಹೌದೇನು ? ನೀನು ಹೇಳಿದ ಸಂಖ್ಯೆ ಸರಿಯೋ ಅಲ್ಲವೋ ಎಂಬುದನ್ನು ಮೊದಲು ತಿಳಿಯಬೇಕಾಗಿದೆ. ಅದಕ್ಕೆ ಆಯಾ ಪಟ್ಟಣ, ಹಳ್ಳಿಗಳ ಅಧಿಪತಿಗಳಿಗೆ ವರ್ತಮಾನ ಕಳುಹಿಸುತ್ತೇನೆ. ಅವರು ತಮ್ಮ ಪ್ರಾಂತದಲ್ಲಿರುವ ಕಾಗೆಗಳ ಸಂಖ್ಯೆಯನ್ನು ತಿಳಿದು ನನಗೆ ಲೆಕ್ಕ ಒಪ್ಪಿಸುತ್ತಾರೆ. ಅಂಥವನ್ನೆಲ್ಲ ಕೂಡಿಸಿ ನಿನ್ನ ಲೆಕ್ಕವು ಸರಿಯೇ ಎಂದು ನೋಡುತ್ತೇನೆ" ಎಂದನು ರಾಜ.

"ಮಹಾ ಪ್ರಭೂ, ಈ ಕ್ಷಣದವರೆಗೆ ನಮ್ಮ ರಾಜ್ಯದಲ್ಲಿರುವ ಕಾಗೆಗಳ ಸಂಖ್ಯೆ ಮೂರು ಲಕ್ಷದ ಇಪ್ಪತ್ತು ಸಾವಿರವೆಂದು ಹೇಳಿದೆನು. ಇನ್ನು ಮೇಲೆ ನೀವು ಹೇಳುವವರು ಲೆಕ್ಕ ಮಾಡುವಾಗ ನಾನು ಹೇಳಿದ ಸಂಖ್ಯೆಯಲ್ಲಿ ವ್ಯತ್ಯಾಸ ಬರಲು ಅವಕಾಶವಿದೆ, ಏಕೆಂದರೆ ಕಾಗೆಗಳು ಪರಮ ಸ್ವೇಚ್ಛಾಜೀವಿಗಳು. ಅವುಗಳಿಗೆ ದೇಶಾಭಿಮಾನವೇ ಇಲ್ಲ. ದೇಶದ ಸರಿಹದ್ದುಗಳ ಮೇಲೆ ಕಿಂಚಿತ್ತೂ ಗೌರವ ಕೂಡಾ ಇಲ್ಲ. ಆದುದರಿಂದ ಪಕ್ಕದ ರಾಜ್ಯಗಳಿಂದ ಕೆಲವು

ಕಾಗೆಗಳು ನಮ್ಮ ರಾಜ್ಯದೊಳಗೆ ಬಂದರೆ, ನಮ್ಮ ರಾಜ್ಯದೊಳಗಿನ ಕಾಗೆಗಳ ಸಂಖ್ಯೆ ನಾನು ಹೇಳಿದ ಸಂಖ್ಯೆ ಮಿಂಚಿಹೋಗಬಹುದು. ಅದೂ ಅಲ್ಲದೆ ನಮ್ಮ ರಾಜ್ಯದ ಕಾಗೆಗಳು ಬೇರೆ ರಾಜ್ಯಗಳಿಗೆ ಹೋಗಿಬಿಟ್ಟರೆ, ನಮ್ಮ ರಾಜ್ಯದ ಕಾಗೆಗಳ ಸಂಖ್ಯೆ ತಗ್ಗಿ ಹೋಗಲೂಬಹುದು. ಅಂತಹ ಅವಾಂತರಗಳಿಗೆ ನಾನು ಬಾಧ್ಯನಾಗಲಾರೆನೆಂದು ಅರಿಕೆ ಮಾಡಿಕೊಳ್ಳುತ್ತೇನೆ. ಪ್ರಭುಗಳು ಚಿತ್ತೈಸಬೇಕು" ಎಂದು ಹೇಳಿದನು ಕುಂದಣ.

ಕುಂದಣನ ಮಾತು ಕೇಳಿ ಸಭಿಕರೆಲ್ಲರೂ ಹರ್ಷಧ್ವಾನ ಮಾಡಿದರು. ಆ ಮೂಲಕವಾಗಿ ಅವನು ಬಹಳ ಬುದ್ಧಿವಂತನೆಂದು ಎಲ್ಲರೂ ಸೂಚಿಸಿದಂತಾಯಿತು. ಕುಂದಣನು ಪರೋಕ್ಷವಾಗಿ ರಾಜನಿಗೆ ಈ ಕಾಗೆಗಳ ಸಂಖ್ಯೆಯನ್ನು ತಿಳಿದುಕೊಳ್ಳುವ ಪ್ರಯತ್ನವು ಎಷ್ಟೊಂದು ಹೆಡ್ಡತನವೆಂದು ತಿಳಿಸಿದಂತಾಗಿತ್ತು. ಇದು ಸಭಿಕರಿಗೆಲ್ಲಾ ಚೆನ್ನಾಗಿ ಅರ್ಥವಾಯಿತು. ರಾಜನೂ ಇದನ್ನು ಅರಿತುಕೊಂಡನು.

"ಹೌದು ಹೌದು. ನೀನು ಹೇಳಿದ್ದು ನಿಜವೇ. ಆ ವಿಷಯದಲ್ಲಿ ಇನ್ನು ಬೇರೆ ಪರೀಕ್ಷೆ ಅಗತ್ಯವಿಲ್ಲ. ನಿನಗೆ ಏನು ಬಹುಮಾನ ಬೇಕೆಂಬುದನ್ನು ಕೇಳು, ಕೊಡುತ್ತೇನೆ" ಎಂದನು ರಾಜ.

ಕುಂದಣನು ಒಂದು ಕ್ಷಣ ತಡೆದು, "ಕ್ಷಮಿಸಬೇಕು ಮಹಾ ಪ್ರಭೂ, ನಾನು ಪ್ರತಿ ನಿಮಿಷದಲ್ಲಿಯೂ ದೇಶದಲ್ಲಿರುವ ಬಗೆಬಗೆಯ ಜನರ ಯೋಗಕ್ಷೇಮಗಳನ್ನು ಕುರಿತೇ ಆಲೋಚಿಸಿಕೊಂಡಿರುವವನು. ಅವರಿಗೆ ಉಪಯೋಗಕರವಾದ ಕೆಲಸಗಳನ್ನೇ ಮಾಡಬೇಕೆಂದಿರುವವನು. ಅಷ್ಟೇ ಅಲ್ಲದೆ ಉಪಯೋಗವಿಲ್ಲದ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುತ್ತ ಕಾಲವನ್ನು ವೃಥಾ ಕಳೆಯಬಾರದೆಂದಿರುವವನು. ನಮ್ಮ ರಾಜ್ಯದ ಕೆಲವು ಪ್ರಾಂತಗಳಲ್ಲಿ ತುಂಬಾ ನೀರಿನ ಕಷ್ಟವಿದೆ. ಮತ್ತೆ ಕೆಲವು ಪ್ರಾಂತದ ಜನರು ಆಗಾಗ ನೆರೆಯ ಹಾವಳಿಗೆ ಗುರಿಯಾಗುತ್ತಾರೆ. ಇಂತಹವೇ ಇನ್ನೂ ಕೆಲವು ಸಮಸ್ಯೆಗಳೂ ಇವೆ. ತಾವು ನಿಪುಣರೊಂದಿಗೆ ಆಲೋಚನೆ ಮಾಡಿ



ದೇಶದ ಕಷ್ಟಗಳಿಗೆ ಪರಿಷ್ಕಾರ ಮಾರ್ಗ ಮಾಡಿಸಬೇಕು. ಆಗ ನಾನು ನಿರುದ್ಯೋಗಿಯಾಗಿರಬೇಕಾಗುವುದಿಲ್ಲ. ಅದೇ ನೀವು ನನಗೆ ಕೊಡುವ ಬಹುಮಾನ" ಎಂದನು.

ಅವನ ಮಾತನ್ನು ಕೇಳಿ ರಾಜನು ಸಂತೋಷಪಡುತ್ತ, "ನಿನ್ನನ್ನು ನನ್ನ ಮುಖ್ಯ ಸಲಹಾದಾರನಾಗಿ ಇಟ್ಟುಕೊಳ್ಳಬೇಕೆಂದಿದ್ದೇನೆ. ನೀನು ರಾಜ್ಯದೊಳಗೆಲ್ಲಾ ತಿರುಗಾಡಿ ಬಂದವನೆನ್ನುವಿ. ಆದುದರಿಂದ ಪ್ರಜೆಗಳಿಗೆ ಅಗತ್ಯವಾದುದೇನೆಂದು ನಿನಗೆ ಚೆನ್ನಾಗಿ ಗೊತ್ತಿರಬೇಕು. ನೀನು ಹೇಳಿದಂತೆ ನಿಪುಣರೊಂದಿಗೆ ಆಲೋಚನೆ ಮಾಡುವಾಗ ನಿನ್ನಂಥವನ ಸಹಾಯ ಬಹಳ ಆಗತ್ಯವೆಂದು ನಾನು ಭಾವಿಸುತ್ತೇನೆ, ಏನನ್ನುವಿ ?" ಎಂದನು.

"ಮಹಾ ಪ್ರಭುಗಳೇ, ತಾವು ನನಗೆ ಎಂತಹ ಬಾಧ್ಯತೆ ಒಪ್ಪಿಸಿದರೂ ಅದರಲ್ಲಿ ನನ್ನ ಶಕ್ತಿಗೆ ಸಾಧ್ಯವಾದಷ್ಟು ತಮಗೂ ರಾಜ್ಯಕ್ಕೂ ಸೇವೆ ಮಾಡಿಕೊಂಡಿರುತ್ತೇನೆ" ಎಂದನು ಕುಂದಣ.

"ಹಾಗಾದರೆ ಮತ್ತೊಂದು ಮುಖ್ಯವಾದ ಬಾಧ್ಯತೆಯನ್ನು ಕೂಡಾ ನೀನು ವಹಿಸಿಕೊಳ್ಳಬೇಕು. ಹತ್ತು ವರ್ಷ ವಯಸ್ಸಿನ ನನ್ನ ಒಬ್ಬನೇ ಒಬ್ಬ ಕುಮಾರನ ವಿದ್ಯಾಭ್ಯಾಸವೇ ಅದು. ನಮ್ಮ ಅಕ್ಕರೆಯ ಮಗನನ್ನು ದೂರದ ಗುರುಕುಲಕ್ಕೆ ಕಳುಹಿಸಲು ನನಗೂ ರಾಣಿಗೂ ಇಷ್ಟವಿಲ್ಲ. ಅವನ ವಿದ್ಯೆಯ ಸಮಸ್ಯೆಯನ್ನೂ ನೀನೇ ಪರಿಹರಿಸುವಿಯಷ್ಟೆ ?" ಎಂದನು ರಾಜ ಕಿರುನಗುವಿನೊಂದಿಗೆ, "ನಾನು ಹದಿನೈದು ವರ್ಷಗಳ ವರೆಗೆ ಬಹಳ ಶ್ರಮಪಟ್ಟು ಗುರುಕುಲದಲ್ಲಿ ಓದಿಕೊಂಡ ವಿದ್ಯೆಗಳೆಲ್ಲಾ ರಾಜ್ಯಪಾಲನೆಗೆ ಎಷ್ಟರಮಟ್ಟಿಗೆ ಉಪಯೋಗವಾಗಿದೆಯೆಂದು ನಿನಗೆ ಗೊತ್ತಾಗಿದೆಯಷ್ಟೆ ? ಪುಸ್ತಕ ಜ್ಞಾನದೊಂದಿಗೆ ಲೌಕಿಕ ಜ್ಞಾನದಲ್ಲಿಯೂ ನೀನು ಗಟ್ಟಿಗನಾಗಿರುವಿ. ನನ್ನ ಕುಮಾರನನ್ನು ಯೋಗ್ಯ ಪಾಲಕನಾಗುವಂತೆ ಮಾಡುವ ಭಾರವನ್ನು ನಿನಗೇ ಒಪ್ಪಿಸುತ್ತೇನೆ. ಅಂಗೀಕರಿಸುವಿಯಷ್ಟೇ ?" ಎಂದನು.

"ಪ್ರಭುಗಳು ನನ್ನ ಮೇಲೆ ಎಷ್ಟೋ ನಂಬುಗೆಯಿಂದ, ಬರಲಿರುವ ವಿಜಯಪುರಿಯ ರಾಜನಿಗೆ ವಿದ್ಯಾಬುದ್ಧಿಗಳನ್ನು ಕಲಿಸುವ ಬಾಧ್ಯತೆಯನ್ನು ನನ್ನ ಮೇಲೆ ಹಾಕುತ್ತೀರಿ. ಅದಕ್ಕೆ ತಕ್ಕ ಅರ್ಹತೆ ನನಗಿದೆಯೆಂದು ನಿರೂಪಿಸಲು ಎಲ್ಲಾ ವಿಧದಲ್ಲಿಯೂ ಪ್ರಯತ್ನಿಸುತ್ತೇನೆ" ಎಂದನು ಕುಂದಣ.

ಅನಂತರ ಬುದ್ಧಿವಂತನಾದ ಕುಂದಣನು ರಾಜನು ತನಗೆ ಒಪ್ಪಿಸಿದ ಎರಡು ಬಾಧ್ಯತೆಗಳನ್ನೂ ಸಮರ್ಥತೆಯಿಂದ ನಿರ್ವಹಿಸಿ ರಾಜನ ದೃಷ್ಟಿಯಲ್ಲಿಯೂ, ಪ್ರಜೆಗಳ ದೃಷ್ಟಿಯಲ್ಲಿಯೂ ಒಳ್ಳೆಯ ದಕ್ಷತೆಯುಳ್ಳವನೆಂದು ಹೆಸರು ಗಳಿಸಿದನು.








## ೮

[ ಮಾಂತ್ರಿಕಳಾದ ಕಾಪಾಲಿನಿ ಚಂದ್ರವರ್ಮನಿಗೆ ಉಪಚರಿಸಿ ಭೋಜನವಿಡಿಸಿದಳು. ಆಮೇಲೆ ಶಂಬಿ ಮಾಂತ್ರಿಕನ ಸಂಗತಿ ಹೇಳಿ, ಅವನ ಹತ್ತಿರವಿರುವ ಶಂಖುವನ್ನು ತಂದುಕೊಡಬೇಕೆಂದು ಚಂದ್ರವರ್ಮನಿಗೆ ಹೇಳಿದಳು. ಒಂದಾನೊಂದು ಮೂಲಿಕೆಯ ಕಷಾಯವನ್ನು ಆ ಶಂಖುದಿಂದ ಕುಡಿದರೆ ಸಾವಿರ ವರ್ಷ ಆಯುಷ್ಯವೂ, ಯೌವನವೂ ಬರುತ್ತದಂತೆ. ಕಡೆಗೆ ಚಂದ್ರವರ್ಮನು ಒಪ್ಪಿಕೊಂಡು ಅಲ್ಲಿಂದ ಹೊರಟನು. —ಇನ್ನು ಓದಿರಿ ]

**ಚಂ**ದ್ರವರ್ಮನಿಗೆ ಸ್ವಲ್ಪವೂ ದಿಕ್ಕುದೆಸೆ ಗೊತ್ತಾಗದಿರುವಂತಹ ಆ ಕೀಕಾರಣ್ಯದಲ್ಲಿ, ದಾರಿ ತೋರಿಸಿಕೊಂಡು ಬಹು ದೊಡ್ಡದಾದ ಕಾಲನಾಗವು ಹೋಗುತ್ತಿದ್ದಿತು. ಚಂದ್ರವರ್ಮನು ಅದರ ಹಿಂದೆಯೇ ನಡೆಯುತ್ತಿದ್ದನು. ಸರ್ಪವು ತನ್ನ ಮೂರು ತಲೆಗಳನ್ನು ಎಲ್ಲಾ ದಿಕ್ಕುಗಳಿಗೂ ತಿರುಗಿಸುತ್ತ, ಮಧ್ಯೆ ಮಧ್ಯೆ ಅಡವಿ ನಡುಗುವಂತಹ ದೊಡ್ಡ ಶಬ್ದದಿಂದ ಭುಸುಗುಡುತ್ತಾ, ಪೊದರುಗಳನ್ನು ಬಳಸಿಕೊಂಡು, ಮರಗಳ ನಡುವಿನಿಂದಾಗಿ ಹೋಗುತ್ತಲೇ ಇದ್ದಿತು. ಆ ಮರಗಳ ಕೆಳಗಿನಿಂದ ಅನೇಕ ಕ್ರೂರ ಪ್ರಾಣಿಗಳೂ, ಬೇರೆ ಬೇರೆ ವರ್ಣಗಳ ವಿಷಸರ್ಪಗಳೂ ಇದಿರಾಗುತ್ತಿದ್ದುವು. ಅವೆಲ್ಲಾ ಕಾಲನಾಗವನ್ನು ನೋಡಿದ ಕೂಡಲೇ ಅಲ್ಲಲ್ಲೇ ತಗ್ಗಿ ಚೆಲ್ಲಾಚೆದರಾಗಿ ಓಡಿ ದಾರಿಬಿಟ್ಟು ಕೊಡುತ್ತಿದ್ದುವು. ಸಾಧಾರಣ ಗಿಡಮರಗಳು ಅದರ ಭುಸುಗುಡುವಿಕೆಗೇ ಬಾಗಿ ಬೀಳುತ್ತಿದ್ದುವು. ಅವನ್ನೆಲ್ಲ ಹೀಗೆ ಕಟ್ಟುಪಾಡಿನಲ್ಲಿ ಇರಿಸಿಕೊಂಡ ಕಾಪಾಲಿನಿಯ ಮಂತ್ರಶಕ್ತಿ ಅಪಾರವೇ ಸರಿ ಎಂದುಕೊಂಡನು ಚಂದ್ರವರ್ಮ.

ಇನ್ನೆಷ್ಟು ದೂರ ನಡೆಯಬೇಕೋ ಎಂದು ತಿಳಿಯದೆ ಚಂದ್ರವರ್ಮನು ಬೇಗ ಬೇಗನೆ ನಡೆದು




ಕಾಲನಾಗದ ಬಳಿಗೆ ಹೋಗಿ, "ಏನಯ್ಯಾ ಕಾಲನಾಗಾ! ನಾವು ಈ ಅರಣ್ಯವನ್ನು ದಾಟಬೇಕಾದರೆ ಇನ್ನೆಷ್ಟು ದೂರ ನಡೆಯಬೇಕು?" ಎಂದು ಪ್ರಶ್ನಿಸಿದನು.

ಹಾಗೆ ಅವನು ಪ್ರಶ್ನಿಸಿದ ಕೂಡಲೇ ಕಾಲನಾಗವು ಸ್ತಬ್ಧವಾಗಿ ನಿಂತುಬಿಟ್ಟಿತು. ಅದರ ಮೂರು ತಲೆಗಳೂ ಒಂದೇಸಾರಿ ಭೂಮಿಯಿಂದ ಮೇಲಕ್ಕೆದ್ದು ಚಂದ್ರವರ್ಮನ ಮುಖವನ್ನು ಪರೀಕ್ಷಿಸುವಂತೆ ನೋಡತೊಡಗಿದುವು. ಹಾಗೆಯೇ ಅದರ ಮೂರು ಮುಖದೊಳಗಿನ ನಾಲಗೆಗಳನ್ನೂ ಮುಂದಕ್ಕೆ ಚಾಚಿ ಚಿಕ್ಕದಾದ ಶಬ್ದ ಹೊರಡಿಸಿತು. ಆ ಶಬ್ದ ಹಾವುಗಳ ಭುಸುಗುಟ್ಟುವಿಕೆಯಂತಿರಲಿಲ್ಲ. ಅದರಲ್ಲಿ ಒಂದರ ಮೇಲೊಂದಾಗಿ ಎರಡು ಮೂರು ಬಗೆಯ ಶಬ್ದಗಳಿದ್ದುವು. ಅದರ ಅರ್ಥವೇನಿರಬಹುದು? ತಾನು ಹಾಗೆ ಕೇಳಿದ್ದೇ ತಪ್ಪಾಯಿತೇನೋ ಎಂದು ಚಂದ್ರವರ್ಮನಿಗೆ ಅನುಮಾನವಾಯಿತು.

ಚಂದ್ರವರ್ಮನು ಆಶ್ಚರ್ಯಪಡುವುದನ್ನು ಅರ್ಥ ಮಾಡಿಕೊಂಡ ಹಾಗೆ, ಕಾಲನಾಗವು ತನ್ನ ಮೂರು ತಲೆಗಳನ್ನೂ ಆಚೆಗೂ ಈಚೆಗೂ ತಿರುಗಿಸಿ, ಹೋಗುವ ದಾರಿಯಿಂದ ಪಕ್ಕಕ್ಕೆ ಸರಿದು ಮತ್ತೊಂದು ದಿಕ್ಕಿಗೆ ಹರಿಯುತ್ತ, ಚಂದ್ರವರ್ಮನನ್ನು ನೋಡಿ, ತನ್ನ ಹಿಂದೆ ಬರುವಂತೆ ತಲೆಯಾಡಿಸಿ ಸಂಜ್ಞೆ ಮಾಡಿತು. ಚಂದ್ರವರ್ಮನಿಗೆ ಇನ್ನಿಷ್ಟು ಅನುಮಾನವಾದರೂ ಅದರ ಹಿಂದೆ ಹೋಗದೆ ಗತ್ಯಂತರವಿಲ್ಲ.

ಕಾಲನಾಗವು ತನಗೆ ಏನೋ ರಹಸ್ಯವನ್ನು ಹೇಳಲು ಪ್ರಯತ್ನಿಸುತ್ತಿದೆ ಎಂದು ಚಂದ್ರವರ್ಮನು ಊಹಿಸಿಕೊಂಡನು. ಆದುದರಿಂದ ಬೇರೆ ಸಂಶಯವೇನೂ ತಾಳದೆ ಕಾಲನಾಗವನ್ನು ಅನುಸರಿಸಿಕೊಂಡು ನಡೆದನು. ಸ್ವಲ್ಪಹೊತ್ತಿಗೆ ಅವರಿಬ್ಬರೂ ಹತ್ತಿರ ಹತ್ತಿರವಾಗಿ ಬೆಳೆದ ಮರಗಳಿಂದ ತುಂಬಿದ ಕಗ್ಗತ್ತಲೆಯ ಅಡವಿಯೊಳಗಿನಿಂದ ಹೊರಬಿದ್ದು, ಬೆಳಕಿನ ಪ್ರಪಂಚಕ್ಕೆ ಕಾಲಿಟ್ಟರು.

ಅಲ್ಲಿ ಸಳಸಳನೆ ಹರಿದೋಡುತ್ತಿರುವ ಬೆಟ್ಟದ ತೊರೆಯೊಂದು ಕಂಡುಬಂತು. ಕಾಲನಾಗವು ಆ ತೊರೆಯ ಹತ್ತಿರ ಹೋಗಿ ನಿಂತು, ತೊರೆಯ ಆಚೆಯ ಬದಿಯಲ್ಲಿರುವ ಒಂದು ವಿಚಿತ್ರವಾದ ವೃಕ್ಷದ ಕಡೆಗೆ ತಲೆಗಳನ್ನು ಎತ್ತಿ ತೋರಿಸುವಂತೆ ನೋಡಿತು. ಚಂದ್ರವರ್ಮನು ಆ ಕಡೆಗೆ ನೋಡುವಷ್ಟರಲ್ಲಿ, ವಿಕಾರವಾದ ನಗುಗಳೂ, ಕೂಗಾಟಗಳೂ ಆ ಮರದ ಕಡೆಯಿಂದ ಕೇಳತೊಡಗಿದುವು. ಆ ಬಗೆಯ ವಿಕೃತ ಧ್ವನಿಗಳನ್ನು ಹೊರಡಿಸುವ ವೃಕ್ಷವನ್ನು ನೋಡುತ್ತಲೇ ತನಗೇನೋ ದೊಡ್ಡ ಗಂಡಾಂತರ ಇದಿರಾಗುವಂತೆ ತೋರಿ ಚಂದ್ರವರ್ಮನ ಶರೀರವಿಡೀ ನಡುಗತೊಡಗಿತು.

ಆ ವಿಚಿತ್ರವಾದ ವೃಕ್ಷವು ಸುಮಾರು ಐವತ್ತು ಅಡಿಗಳಷ್ಟು ಎತ್ತರವಾಗಿ ಗುಮ್ಮಟಾಕಾರದಲ್ಲಿ



ಗುಂಪಾಗಿ ಬೆಳೆದ ಎಲೆಗಳ ರಾಶಿಯಂತಿದ್ದಿತು. ನೋಡುತ್ತಿದ್ದ ಹಾಗೆ ಅನೇಕ ಬಗೆಯ ಪ್ರಾಣಿಗಳ ತಲೆಗಳೂ ಪಕ್ಷಿಗಳ ತಲೆಗಳೂ ಮರದಲ್ಲಿ ನೇತಾಡು ತ್ತಿರುವುದು ಕಂಡಿತು. ಅವೆಲ್ಲಾ ಚಂದ್ರವರ್ಮ ನನ್ನೂ ಕಾಲನಾಗವನ್ನೂ ನೋಡಿದ ಕೂಡಲೇ ಆ ರೀತಿಯಾಗಿ ಕೂಗಿಕೊಳ್ಳಲು ಪ್ರಾರಂಭಿಸಿದ್ದುವು. ಎಲ್ಲಾ ಒಟ್ಟು ಭಯಂಕರ ಕಿರಿಚಾಟ !

ಚಂದ್ರವರ್ಮನು ತನ್ನ ದೃಷ್ಟಿಯನ್ನು ಕಾಲ ನಾಗದ ಕಡೆಗೆ ಹರಿಸಿದನು. ಕಾಲನಾಗವು ಅವನನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದಿತು. ಚಂದ್ರ ವರ್ಮನು ಆ ವಿಚಿತ್ರ ವೃಕ್ಷದ ಕಡೆಗೆ ತೋರು ಬೆರಳನ್ನು ತೋರಿಸಿ, ಕಾಲನಾಗವನ್ನು ಕುರಿತು, "ಅದು ಮರವೋ, ಆ ರೂಪದಲ್ಲಿರುವ ಯಾವ ನಾದರೂ ರಾಕ್ಷಸನೋ ? ಇಲ್ಲಿಗೇಕೆ ನನ್ನನ್ನು ಕರೆದು ಕೊಂಡು ಬಂದೆ ? " ಎಂದು ಕೇಳಿದನು.

ಕಾಲನಾಗವು ನಿಃಶಬ್ದವಾಗಿ ತಲೆಗಳನ್ನು ಆಡಿಸಿ, ತೊರೆಯ ಕಡೆಗೆ ನಡೆಯಿತು. ಚಂದ್ರವರ್ಮನು ಮತ್ತೇನೂ ಹೇಳದೆ ಅದನ್ನು ಅನುಸರಿಸಿ ನಡೆದನು. ಸ್ವಲ್ಪಹೊತ್ತಿಗೆ ಕಾಲನಾಗವು ತೊರೆಯನ್ನು ದಾಟಿ ಆ ವಿಚಿತ್ರ ವೃಕ್ಷದ ಹತ್ತಿರ ಹೋಗಿ ನಿಂತಿತು. ಚಂದ್ರವರ್ಮನು ಹತ್ತಿರಹೋದ ಕೂಡಲೇ ವೃಕ್ಷ ದಿಂದ ಇನ್ನಿಷ್ಟು ಜೋರಾಗಿ ಭಯಂಕರ ಕೂಗಾಟ ಗಳು ಎದ್ದುವು. ಚಂದ್ರವರ್ಮನು ಗುಂಡಿಗೆಯನ್ನು ಕಲ್ಲುಮಾಡಿಕೊಂಡನು. ಒಂದುವೇಳೆ ಕಾಲನಾಗವು ತನ್ನನ್ನು ಮೋಸಪಡಿಸಿ ಹತಮಾಡಲು ನೋಡಿದರೂ ತಾನು ಪ್ರತಿಯಾಗಿ ಏನು ಮಾಡಲೂ ಸಾಧ್ಯವಿರ ಲಿಲ್ಲ. ಅವನು ಯಾವಾಗ ಆ ಕಾಡಿನೊಳಗೆ ಸೇರಿದನೋ ಆಗಲೇ ಮಾಂತ್ರಿಕ ಶಕ್ತಿಗಳೊಳಗೆ ಸಿಕ್ಕಿಕೊಂಡು ಬಿಟ್ಟಿದ್ದನು. ತನ್ನ ದೇಹಶಕ್ತಿಯಾಗಲಿ, ಕತ್ತಿಯಾಗಲಿ, ಈ ಮಂತ್ರ ತಂತ್ರಗಳಿಂದ ತನ್ನನ್ನು ಕಾಪಾಡುವಂತಿಲ್ಲ. ಈ ನಿಮಿಷದಲ್ಲಿ ತನಗೆ ಮೇಲಾಗಲೀ ಕೀಳಾಗಲೀ, ಒಳಿತಾಗಲಿ, ಕೆಡು ಕಾಗಲಿ, ಪೆಟ್ಟಾಗಲಿ, ಮರಣವೇ ಆಗಲಿ ಸಂಭವಿ ಸಿದರೆ ಅದೆಲ್ಲವೂ ಮಾಂತ್ರಿಕಳಾದ ಆ ಕಾಪಾಲಿನಿಯ ಆಜ್ಞೆಯಂತೆಯೇ ನಡೆಯುತ್ತದೆ.

ಚಂದ್ರವರ್ಮನು ಹೀಗೆ ಆಲೋಚಿಸಿಕೊಂಡಿರು ವಾಗ, ಕಾಲನಾಗವು ಅವನ ತೀರ ಹತ್ತಿರ ಬಂದು ತಲೆಗಳನ್ನು ಎತ್ತಿ ವೃಕ್ಷದ ಕಡೆಗೆ ಸಂಜ್ಞೆ ಮಾಡುತ್ತಿದ್ದಿತು. ಅಂದರೆ ಸರ್ಪವು ತನ್ನನ್ನು ಆ ವೃಕ್ಷವನ್ನು ಏರಲು ಹೇಳುತ್ತದೆಂದು ಚಂದ್ರ ವರ್ಮನಿಗೆ ಗೊತ್ತಾಯಿತು. ತಾನು ಆ ವೃಕ್ಷದಲ್ಲಿ ಕಾಣುವ ತಲೆಗಳನ್ನು ಕಡಿಯಬೇಕೆಂದು ಅರ್ಥವೆ ?

ಕೂಡಲೇ ಅವನು ಒರೆಯಿಂದ ಕತ್ತಿಯನ್ನು ಹಿರಿದು ನಿರ್ಭಯವಾಗಿ ಮರದ ಹತ್ತಿರ ಹೋಗಿ, ಅದರ ಕಾಂಡಕ್ಕೆ ಕತ್ತಿಯಿಂದ ಒಂದೇಟು ಕೊಟ್ಟನು, ಮರುಕ್ಷಣದಲ್ಲಿ ದಿಕ್ಕುಗಳೆಲ್ಲಾ ಪ್ರತಿಧ್ವನಿಸುವಂತೆ ಹಾಹಾಕಾರಗಳು ಹೊರಟುವು. ಕಾಲನಾಗವು




ವರ್ಮನು ಏನೂ ಭಯಪಡದೆ ಕೊಂಬೆಗಳ ಕಡೆಗೆ ಹೋಗಿ, ತನ್ನ ಕತ್ತಿಯಿಂದ ಹೆಬ್ಬುಲಿಯ ತಲೆಯ ಹಾಗಿದ್ದು, ಕೋರೆಹಲ್ಲುಗಳನ್ನು ತೋರಿಸಿ ಹೆದರಿಸುವ ಒಂದು ತಲೆಯನ್ನು ಕೊಂಬೆಯಿಂದ ಕಡಿದನು. ಮರುಕ್ಷಣದಲ್ಲಿ ಆ ತಲೆ ಧೊಪ್ಪನೆ ಕೆಳಗೆಬಿತ್ತು. ಚಂದ್ರವರ್ಮನ ಆಶ್ಚರ್ಯಕ್ಕೆ ಅಂತ್ಯವೇ ಇಲ್ಲ. ಭೂಮಿಗೆ ಬಿದ್ದ ಆ ಹೆಬ್ಬುಲಿಯ ತಲೆ ಹೆಬ್ಬುಲಿಯ ತಲೆಯೆಂಬುದು ಬರೀ ಭ್ರಮೆ ! ಅದು ಒಂದು ಸೌತೇ ಜಾತಿಯ ಹಣ್ಣಿನಂತೆ ಬದಲಾಯಿಸಿತು.

ಚಂದ್ರವರ್ಮನು ಬೇಗಬೇಗನೆ, ಮರದಿಂದಿಳಿದು ಬರುವಷ್ಟರಲ್ಲಿ ಕಾಲನಾಗವು ಆ ಹಣ್ಣನ್ನು ಬಾಯಿಯಲ್ಲಿ ಕಚ್ಚಿಕೊಂಡು, ಅವನ ಕಡೆಗೆ ತಿರುಗಿತು. ಚಂದ್ರವರ್ಮನು ಆ ಹಣ್ಣನ್ನು ತೆಗೆದುಕೊಂಡು ಗಟ್ಟಿಯಾಗಿ ಕಚ್ಚಿ ನೋಡಿದನು. ಮರುಕ್ಷಣದಲ್ಲಿ ಕಾಲನಾಗ ಜೋರಾಗಿ ನಗುವಂತೆ ಅವನಿಗೆ ಭಾಸವಾಯಿತು. ಭಾಸ ಮಾತ್ರವಲ್ಲ, ಅದು ಸಂತೋಷದಿಂದ ನಗುತ್ತಾ ಇದ್ದಿತು.

ಚಂದ್ರವರ್ಮನು, ಅದರ ಕಡೆಗೆ ತಿರುಗಿ ನೋಡಿದನು. "ಚಂದ್ರವರ್ಮಾ, ಈಗ ಗೊತ್ತಾಯಿತೆ ಈ ವೃಕ್ಷದಲ್ಲಿ ನೇತಾಡುವ ವಿಚಿತ್ರ ತಲೆಗಳ ಸಂಗತಿ ?" ಎಂದು ಕೇಳುವಂತೆ ನಗುತ್ತಿತ್ತು ಕಾಲನಾಗ. ಅದರಿಂದ ಚಂದ್ರವರ್ಮನ ಭಯ ಸಂದೇಹಗಳೆಲ್ಲಾ ಮಟಮಾಯವಾದುವು.

ವಿಶೇಷವೆಂಬಂತೆ ಚಂದ್ರವರ್ಮನಿಗೆ ಎಲ್ಲವೂ ಸ್ಪಷ್ಟವಾಗಿ ಅರ್ಥವಾಯಿತು. ತಾನು ರುಚಿಯಾದ ಹಣ್ಣನ್ನು ತಿನ್ನುತ್ತಿರುವಾಗ, ತನಗೆ ಕಾಲನಾಗನ ಭಾಷೆಯೂ ಅರ್ಥವಾಯಿತೆಂದುಕೊಂಡನು. ಆ ಕ್ಷಣದವರೆಗೂ ಅದರ ಸನ್ನೆಗಳೆಲ್ಲ ಹಾವಿನದೇ ಆದರೂ ಅದರೊಳಗಿನ ಅರ್ಥವು ಈಗ ಚೆನ್ನಾಗಿ ಗೊತ್ತಾಯಿತು. ಅವನಿಗೆ ಆನಂದದ ಜೊತೆಯಲ್ಲಿ ಆಶ್ಚರ್ಯವೂ ಸೇರಿತ್ತು.

ಭೀತಿಯಿಂದ ನಡುಗುವಂತೆ ಶರೀರವನ್ನು ಕುಂಚಿತಪಡಿಸಿ, ಸುಳಿದು ಸುಳಿದು ಚಂದ್ರವರ್ಮನ ಮುಂದೆ ಬಂದಿತು. ಚಂದ್ರವರ್ಮನು ಅದಾವುದನ್ನೂ ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ಅವನಿಗೊಂದು ತೀವ್ರವಾದ ಚರಮೋವೇಶವು ಬಂದ ಹಾಗಾಗಿತ್ತು. ಮರದ ತುಂಬಾ ನೇತಾಡಿಕೊಂಡು ತನ್ನನ್ನು ಹೆದರಿಸುವಂತೆ ಕೂಗುತ್ತಿರುವ ಪ್ರಾಣಿ ಪಕ್ಷಿಗಳ ತಲೆಗಳನ್ನು ಕಡಿಗಡಿದು ನೆಲಕ್ಕೆ ಉದುರಿಸುತ್ತೇನೆಂಬ ನಿಶ್ಚಯಕ್ಕೆ ಬಂದನು ಚಂದ್ರವರ್ಮ.

ಕಾಲನಾಗವು ಆ ವೃಕ್ಷದ ಕಾಂಡಕ್ಕೆ ತನ್ನ ಶರೀರವನ್ನು ಸುತ್ತಿ ಕೊಂಬೆಗಳ ಕಡೆಗೆ ಒಂದುಸಾರಿ ನೋಡಿತು. ಅದು ಹೇಳಲಿರುವುದನ್ನು ತಿಳಿದವನಂತೆ ಚಂದ್ರವರ್ಮನು ಸರಸರನೆ ಮರದ ಮೇಲಕ್ಕೆ ಏರಿದನು. ಇಷ್ಟರೊಳಗೆ ಮರದ ಮೇಲೆ ನೇತಾಡುತ್ತಿರುವ ತಲೆಗಳಿಂದ ವಿಕೃತವಾದ ಬೊಬ್ಬೆಗಳು ಎಡೆಬಿಡದೆ ಹೊರಟುಕೊಂಡೇ ಇದ್ದುವು. ಚಂದ್ರ



"ಅಷ್ಟೇ ಅಲ್ಲ. ಆ ಹಣ್ಣು ಕಚ್ಚಿಕಚ್ಚಿ ತಿನ್ನುವಾಗ ನಿನಗೆ ಪಶುಪಕ್ಷಿಗಳ ಭಾಷೆ ಕೂಡಾ ಅರ್ಥವಾಗುವಂತಾಯಿತು. ಮಹಾ ಮಾಂತ್ರಿಕನಾದ ಶಂಖನ ಹತ್ತಿರ ಹೋಗಲು, ಅವನ ಹತ್ತಿರವಿದ್ದ ಶಂಖವನ್ನು ತಸ್ಕರಿಸಿಕೊಂಡು ಬರಲು ಈ ಬಗೆಯ ಭಾಷಾಜ್ಞಾನ ನಿನಗೆ ತುಂಬಾ ಸಹಾಯಕಾರಿಯಾಗುತ್ತದೆ. ಶಂಖನ ಭೃತ್ಯವಾದ ವಿಚಿತ್ರ ಅಗ್ನಿಪಕ್ಷಿಯಿಂದ ಅಪಾಯಬಾರದಂತೆ ನೀನು ಬಹಳ ಎಚ್ಚರಿಕೆಯಲ್ಲಿರಬೇಕಾಗಿದೆ. ಈಗ ನೀನು ಎಲ್ಲಾ ಜೀವರಾಶಿಗಳ ಭಾಷೆಯೂ ಅರ್ಥಮಾಡಿಕೊಳ್ಳಲು ಸಾಧ್ಯವಾಗಿದೆ. ಆದುದರಿಂದ ನೀನು ತಲೆ ಹಾಕಿದ ಕೆಲಸದಲ್ಲಿ ವಿಜಯ ಸಾಧಿಸಿಕೊಳ್ಳುವಿ" ಎಂದಿತು ಕಾಲನಾಗ, ಅದರ ಸಂಜ್ಞಾಭಾಷೆಯಲ್ಲಿ ಅದೆಲ್ಲ ಸರಾಗವಾಗಿ ಅರ್ಥವಾಯಿತು ಚಂದ್ರವರ್ಮನಿಗೆ.

ಇದನ್ನು ಅರಿತು ಚಂದ್ರವರ್ಮನಲ್ಲಿ ಎಲ್ಲಿಲ್ಲದಷ್ಟು ಉತ್ಸಾಹವೇರ್ಪಟ್ಟಿತು. ಅವನು ಕಾಲನಾಗವನ್ನು ಕೃತಜ್ಞತೆಯ ದೃಷ್ಟಿಯಿಂದ ನೋಡುತ್ತ, "ಕಾಲನಾಗಾ, ನೀನು ನನಗೆ ದೊಡ್ಡ ಸಹಾಯವನ್ನು ಮಾಡಿರುವಿ. ಇದಕ್ಕೆ ಪ್ರತಿಯಾಗಿ ನನ್ನಿಂದ ಏನನ್ನು ಅಪೇಕ್ಷಿಸುವಿ ? ಸಂದೇಹಿಸದೆ ಹೇಳಯ್ಯ" ಎಂದು ಹೇಳಿದನು.

ಕಾಲನಾಗವು ಏನೋ ವಿಚಾರದಿಂದ ತಲೆಗಳನ್ನು ನೆಲಕ್ಕೆ ತಗ್ಗಿಸಿ, "ನೀನು ನನಗೆ ಮಾಡಬೇಕಾದ ಸಹಾಯ ಅಷ್ಟೇನೂ ದೊಡ್ಡದಲ್ಲಪ್ಪ. ಆದರೂ ಅದನ್ನು ಈಗಲೇ ಹೇಳಿ ಪ್ರಯೋಜನವೇನೂ ಇಲ್ಲ. ನೀನು ಒಪ್ಪಿಕೊಂಡ ಕಾರ್ಯ ಮುಗಿಯುವವರೆಗೂ ಶಂಖನಿಂದ ಅಪೂರ್ವ ಶಕ್ತಿಗಳ ಶಂಖವನ್ನು ತರುವವರೆಗೂ ನಾನು ಕಾದಿರಲೇಬೇಕಾಗಿದೆ" ಎಂದಿತು.

ಕಾಲನಾಗವು ಹೇಳಿದುದನ್ನು ಕೇಳಿ, ಚಂದ್ರವರ್ಮನಿಗೆ ಕುತೂಹಲವೇರ್ಪಟ್ಟಿತು. ಅದು ಎಂತಹ ಸಹಾಯ ಕೇಳುವುದೆಂಬುದನ್ನು ಈಗಲೇ ತಿಳಿಯಬೇಕೆನಿಸಿತು. ಅವನು ಕಾಲನಾಗವನ್ನು ಅನುಮಾನದಿಂದ ನೋಡುತ್ತ, "ಕಾಲನಾಗಾ, ನೀನು ನಿಜವಾಗಿಯೂ ಸರ್ಪವೇ ಏನು ? ಅಥವಾ ಏನೋ ಶಾಪದಿಂದ ಇಂಥಾ ಸರ್ಪ ರೂಪವನ್ನು ಪಡೆದ ಮಾನವನೋ ?" ಎಂದನು.

"ನಾನು ಒಂದು ಕಾಲದಲ್ಲಿ ಸರ್ಪವಾಗಿರಲಿಲ್ಲ. ನೀನು ಸಂದೇಹಪಡುವಂತೆ ಮಾನವನಾಗಿಯೇ ಹುಟ್ಟಿದ್ದೆ. ಶಂಖನಿಗೆ ಶಿಷ್ಯನಾಗಿ ನಾನಿದ್ದೆ. ಅವನು ಕಾಪಾಲಿನಿಗೆ ಹಾನಿ ಮಾಡಲು ನನ್ನನ್ನು ಕಳುಹಿಸಿದನು. ನಾನು ಇಲ್ಲಿಗೆ ಬಂದು ಆಕೆಯ ಕೈಗೆ ಸಿಕ್ಕಿಬಿದ್ದು ಹೀಗೆ ಮೂರು ತಲೆಗಳ ಹೆಬ್ಬಾವಾದೆನು. ಆ ದಿನದಿಂದಲೂ ಕಾಪಾಲಿನಿ ನನ್ನನ್ನು ಭೃತ್ಯನ ಹಾಗೆ ಉಪಯೋಗಿಸಿಕೊಳ್ಳುತ್ತಿದ್ದಾಳೆ. ನೀನು ಆಕೆ ಹೇಳಿದ ಕೆಲಸದಲ್ಲಿ ವಿಜಯವನ್ನು ಸಾಧಿಸಿಕೊಂಡು ಬಂದರೆ, ನಿನ್ನ ಮಹತ್ವ ಹೆಚ್ಚುತ್ತದೆ. ಆಗ ನೀನು ನನ್ನನ್ನು ಈ ತುಚ್ಛವಾದ ಜೀವಿತದಿಂದ ಪಾರುಮಾಡಲು



ಸಾಧ್ಯವಿದೆ" ಎಂದು ಕಾಲನಾಗವು ಬಹಳ ಚಿಂತೆಯಿಂದ ಹೇಳಿತು.

"ಈ ಸಣ್ಣ ವಿಷಯಕ್ಕೆ ನೀನು ಅಷ್ಟು ಕಾಲದ ವರೆಗೆ ಕಾಯುವ ಅಗತ್ಯವೇನಿಲ್ಲ. ಈಗಲೇ ಹಿಂದಿರುಗಿ ಕಾಪಾಲಿನಿಯ ಬಳಿಗೆ ಹೋಗೋಣ. ಅವಳು ನನ್ನ ಮಾತನ್ನು ತೆಗೆದು ಹಾಕಲಾರಳು. ನಿನಗೆ ಮತ್ತೆ ಮಾನವರೂಪ ಪ್ರಸಾದಿಸಬೇಕೆಂದು ನಾನು ಅವಳನ್ನು ಕೇಳುತ್ತೇನೆ" ಎಂದನು ಚಂದ್ರವರ್ಮ.

ಈ ಮಾತನ್ನು ಕಾಲನಾಗವು ಒಪ್ಪಲಿಲ್ಲ. "ಕಾಪಾಲಿನಿಯ ಸಂಗತಿ ಕೂಲಂಕಷವಾಗಿ ನಿನಗೆ ತಿಳಿಯದು. ಚಂದ್ರವರ್ಮಾ, ಆಕೆ ಬಹುದೊಡ್ಡ ಅನುಮಾನದವಳು. ಅನುಮಾನವೇ ಮೂರ್ತಿವಂತ ಳಾದವಳು. ನಾವಿಬ್ಬರೂ ಒಂದಾಗಿ ತನಗೇನೋ ದ್ರೋಹ ಬಗೆಯುತ್ತಿದ್ದೇವೆಂದು ಅವಳು ಭಾವಿ ಸಿದರೂ ಆಶ್ಚರ್ಯವಿಲ್ಲ. ಹಾಗೆ ಅವಳು ಭಾವಿಸಿ ಬಿಟ್ಟರೆ, ನನಗೆ ಮಾತ್ರವಲ್ಲ, ನಿನಗೂ ಕೆಡುಕಾಗು ತ್ತದೆ. ನಾನು ಇಷ್ಟು ಕಾಲದವರೆಗೆ ಈ ಸರ್ಪ ಜೀವನದಲ್ಲಿ ಇದ್ದಿದ್ದೇನೆ. ಇನ್ನೂ ಕೆಲವು ದಿನಗಳ ವರೆಗೆ ಕಾದಿರಲು ನನಗೇನೂ ಕಷ್ಟವಿಲ್ಲ. ಬೇಯಲಿ ಕ್ಕಾಗಿವಾಗ ಗಡಿಗೆ ಒಡೆದ ಹಾಗಾಗಬಾರದು" ಎಂದಿತು ಕಾಲನಾಗ.

ಚಂದ್ರವರ್ಮನಿಗೆ ಕಾಲನಾಗವು ಹೇಳಿದುದರಲ್ಲಿ ನಿಜವಿರುವಂತೆಯೇ ತೋರಿತು. ಎಷ್ಟೇ ಆದರೂ ಮಾಂತ್ರಿಕರೆಂದರೆ ಮಾಯಾತಾಂತ್ರಿಕರೇ. ನಂಬಿಕೆಗೆ ಯೋಗ್ಯರಾದವರಲ್ಲ. ಯಾವ ಕ್ಷಣದಲ್ಲಿ ಅವರು ಯಾರನ್ನು ಕುರಿತು ಎಂತಹ ಅನುಮಾನಗಳಿಗೆ ಗುರಿಯಾಗುವರೋ ಹೇಳುವುದು ಕಷ್ಟ. ಹೀಗೆ ಯೋಚಿಸಿ ಚಂದ್ರವರ್ಮನು ಮರದ ಹತ್ತಿರದಿಂದ ಹಿಂದಕ್ಕೆ ಕದಲಿದನು. ಕಾಲನಾಗವು ಮೊದಲಿನಂತೆ ಅವನಿಗೆ ದಾರಿ ತೋರಿಸುತ್ತ ಮುಂದೆ ಹೋಯಿತು. ಹಸಿವೆಯಡಗಿ ಹೊಸ ಉತ್ಸಾಹದಲ್ಲಿರುವ ಚಂದ್ರ ವರ್ಮನು ಅದನ್ನು ಅನುಸರಿಸಿ ನಡೆದನು.

ಸರಿಯಾಗಿ ಸೂರ್ಯನು ನಡುನೆತ್ತಿಗೆ ಬರುವ ಸಮಯದಲ್ಲಿ ಅವರಿಬ್ಬರೂ ಮತ್ತೊಂದು ದಟ್ಟ ವಾದ ಅಡವಿಯೊಳಗಿನಿಂದ ಹೊರಬಿದ್ದರು. ಈಗ ಅವರಿಬ್ಬರ ಇದಿರಿನಲ್ಲಿ ಅರಣ್ಯವಿರುವುದಕ್ಕೆ ಬದಲಾಗಿ, ಅಲ್ಲಲ್ಲಿ ಮರಗಳು ವಿರಳಾಗಿ, ಬೆಟ್ಟ ಗಳೂ ಕಣಿವೆಗಳೂ ಗೋಚರಿಸಿದುವು. ಕತ್ತಲೆ ಕವಿದ ದಟ್ಟವಾದ ಕಾಡುಗಳು ಅಲ್ಲೆಲ್ಲೂ ಕಾಣಲಿಲ್ಲ.

"ಚಂದ್ರವರ್ಮಾ, ಇನ್ನು ನಾನು ಬರಬೇಕಾಗಿಲ್ಲ. ಬರಲಿಕ್ಕೂ ಸಾಧ್ಯವಿಲ್ಲ. ಕಾಪಾಲಿನಿಯ ಆಜ್ಞೆಯಂತೆ ನಿನ್ನನ್ನು ಈ ಅಡವಿಗಳಿಂದ ದಾಟಿಸಿದೆನು. ಇನ್ನು ಮುಂದಕ್ಕೆ ನೀನು ಒಬ್ಬಂಟಿಗನಾಗಿಯೇ ಹೋಗ ಬೇಕು. ಅಲ್ಲಿ ಕಾಣುವ ಬೆಟ್ಟಗಳಲ್ಲಿ, ಕಣಿವೆಗಳಲ್ಲಿ ನೀನು ಅಡಿಗಡಿಗೂ ಅಪಾಯವನ್ನು ಇದಿರಿಸ ಬೇಕಾದೀತು. ನೀನು ಧೈರ್ಯವನ್ನು ಬಿಡದಿರುವ

ವರೆಗೆ, ನಿನಗೆ ಅರ್ಥವಾಗುವ ಪಶುಪಕ್ಷಿಗಳ ಭಾಷೆಗಳಿಂದಾಗಿ, ಎಲ್ಲಾ ಗಂಡಾಂತರಗಳಿಂದಲೂ ಪಾರಾಗಿ ವಿಜಯವನ್ನು ಸಾಧಿಸಬಲ್ಲೆ" ಎಂದಿತು ಕಾಲನಾಗ.

ಆಮೇಲೆ ಚಂದ್ರವರ್ಮನಿಂದ ಅಪ್ಪಣೆ ಪಡೆದುಕೊಂಡು ಕಾಲನಾಗವು ಭುಸುಗುಟ್ಟುತ್ತ, ಬಂದ ದಾರಿಯಲ್ಲಿಯೇ ಹಿಂದಿರುಗಿ ಹೋಗತೊಡಗಿತು. ಮರಗಳ ಮರೆಯಲ್ಲಿ ಅದು ಕಣ್ಣಿಗೆ ಕಾಣದೆ ಹೋಗುವವರೆಗೂ ನೋಡುತ್ತಿದ್ದ ಚಂದ್ರವರ್ಮನು, ಆಮೇಲೆ ಉದ್ದವಾದೊಂದು ಉಸಿರು ತೆಗೆದು ತಾನು ಹೋಗಬೇಕಾದ ಹಾದಿ ಹಿಡಿದು ನಡೆಯತೊಡಗಿದನು.

ದಾರಿಯಲ್ಲಿ ಚಿಕ್ಕವೂ ದೊಡ್ಡವೂ ಆದ ಕಲ್ಲುಗಳಿದ್ದವು ಎರಡು ಬದಿಗಳಲ್ಲಿಯೂ ಮುಳ್ಳುಗಿಡಗಳ ಪೊದರುಗಳಿದ್ದುವು. ಅಲ್ಲಲ್ಲಿ ಆಕಾಶಕ್ಕೆ ಮುತ್ತಿಡುವಂತಹ ಮಹಾ ವೃಕ್ಷಗಳೂ ಇದ್ದುವು. ಆ ಪ್ರಾಂತದಲ್ಲಿ ತಿರುಗಾಡುವ ಮೃಗಗಳೂ ಪಕ್ಷಿಗಳೂ ಹೊರಡಿಸುವ ಬಗೆಬಗೆಯ ಶಬ್ದಗಳೆಲ್ಲ, ಅಳಿದೆಯುವರನ್ನು ಒರಗಿಸಿ ಬಿಡುತ್ತಿದ್ದುವು. ಕಲ್ಲೆದೆಯವನಾದ ಚಂದ್ರವರ್ಮನಿಗೆ ಈಗ, ಮೃಗಪಕ್ಷಿಗಳ ಭಾಷೆ ತಿಳಿದುದರಿಂದ, ಹೆದರುವುದಕ್ಕೆ ಬದಲಾಗಿ, ಆ ಶಬ್ದಗಳನ್ನು ಅರ್ಥಮಾಡಿಕೊಳ್ಳ ತೊಡಗಿದನು. ಯಾವುದೋ ಹೊಸತೊಂದು ಎರಡು ಕಾಲಿನ ಪ್ರಾಣಿ ತಮ್ಮ ಪ್ರಾಂತಕ್ಕೆ ಬಂದಿದೆಯೆಂದು, ಅವುಗಳು ಒಂದರೊಡನೊಂದು ಎಚ್ಚರಿಕೆ ಹೇಳುತ್ತಿದ್ದುವು.

ಸೂರ್ಯನು ಪಶ್ಚಿಮಕ್ಕೆ ತಿರುಗಿ ಭೂಮಿಯ ಅಂಚಿನವರೆಗೆ ಬರುವವರೆಗೂ ಚಂದ್ರವರ್ಮನು ಉತ್ತರದಿಕ್ಕನ್ನು ಹಿಡಿದು ನಡೆಯುತ್ತಲೇ ಇದ್ದನು. ಅಷ್ಟುಹೊತ್ತಿಗೆ ಅವನಿಗೆ ತುಂಬಾ ಆಯಾಸವೂ ಆಯಿತು, ಹಸಿವೆಯೂ ಎದ್ದಿತು. ಅವನು ದೊಡ್ಡದೊಂದು ಮರದ ಅಡಿಗೆ ಹೋಗಿ, ಅದರ ಕಾಂಡಕ್ಕೆ ಒರಗಿ ಕುಳಿತು ಸುತ್ತಲೂ ನೋಡಿದನು. ದೃಷ್ಟಿ



ಹರಿದಷ್ಟು ದೂರದ ವರೆಗೂ ಒಂದೇ ಒಂದು ಫಲ ವೃಕ್ಷವಿರುವಂತೆ ಕಾಣಲಿಲ್ಲ. ಏನಾದರೂ ಅಗೆದು ಗೆಡ್ಡೆ ಗೆಣಸುಗಳಿವೆಯೋ ನೋಡೋಣವೆಂದರೆ ಅಲ್ಲಿರುವುದೆಲ್ಲ ಕೇವಲ ಮುಳ್ಳು ಪೊದರುಗಳೇ, ಕಲ್ಲುಗಳ ಕುಪ್ಪೆರಾಶಿಗಳೇ.

"ಇಲ್ಲಿ ಸುಮ್ಮನೆ ಕುಳಿತು ಕಾಲಕಳೆದು ಲಾಭವೇನಿಲ್ಲ. ಇನ್ನಿಷ್ಟು ಮುಂದೆ ಹೋದರೆ ಯಾವುದಾದರೂ ಹಣ್ಣಿನ ಮರಗಳು ಕಾಣಬಹುದು" ಎಂದುಕೊಂಡು ಚಂದ್ರವರ್ಮನು ಅಲ್ಲಿಂದೆದ್ದು ಮುಂದಕ್ಕೆ ನಡೆದನು. ಸ್ವಲ್ಪದೂರ ಹೋಗಿ ದೊಡ್ಡದೊಂದು ಬಂಡೆಯನ್ನು ಬಳಸಿ ನಡೆಯುವಷ್ಟರಲ್ಲಿ, ಅವನ ಇದಿರಿಗೆ ಕಂಡ ದೃಶ್ಯವು ಅವನನ್ನು ದಂಗುಬಡಿಸಿತು. ಫಲಭಾರದಿಂದ ಬಾಗಿಹೋದ ಅನೇಕ ವೃಕ್ಷಗಳು ಅಲ್ಲಿಗೆ ತುಸುದೂರದಲ್ಲಿದ್ದುವು. ಚಂದ್ರವರ್ಮನಿಗೆ ಅತ್ಯಾನಂದವಾಯಿತು. ಅವನು ಕಾಲಿಗೆ ಅಡ್ಡಬರುವ ಕಲ್ಲುಗಳನ್ನೂ, ಪೊದರುಗಳನ್ನೂ

ತಪ್ಪಿಸಿಕೊಂಡು ವೇಗವಾಗಿ ಮುಂದಕ್ಕೆ ನಡೆದನು. ಒಂದೆರಡು ನಿಮಿಷ ನಡೆಯುವಷ್ಟರಲ್ಲಿ ಶರೀರಕ್ಕೆ ಯಾವುದೋ ಬಿಸಿಗಾಳಿ ಸೋಂಕತೊಡಗಿತು. ಚಂದ್ರವರ್ಮನು ಆಶ್ಚರ್ಯಪಡುತ್ತ ಇನ್ನಿಷ್ಟು ಮುಂದಕ್ಕೆ ಹೋದನು. ಅಲ್ಲಿಂದ ನೆಲವು ಇಳಿಜಾರಾಗಿ ಕಣಿವೆಗೆ ಹೋಗುತ್ತಿತ್ತು. ಕೆಳಗೆ ಯಾವುದೋ ದೊಡ್ಡ ನದಿ ಹರಿಯುವಂತೆ ನೀರಿನ ಭೋರ್ಗರೆತವೂ ಕೇಳುತ್ತಿತ್ತು. ಆ ನದಿಯಿಂದ ಬಿಸಿಬಿಸಿಯಾದ ಹೊಗೆ ಏಳುವಂತೆಯೂ ಕಂಡಿತು.

ಚಂದ್ರವರ್ಮನು ಆ ವಿಚಿತ್ರವಾದ ನದಿಯನ್ನು ನೋಡುತ್ತಲೇ ಏನೂ ತೋರದೆ ನಿರ್ವಿಣ್ಣನಾದನು. ಎಲ್ಲಿಯೋ ಅಗ್ನಿಪರ್ವತದ ಕಡೆಯಿಂದ ಬಿಸಿನೀರಿನ ಬುಗ್ಗೆ ಎದ್ದು ಈ ಜಲಪ್ರವಾಹವಾಗಿ ಹರಿಯುತ್ತಿರಬೇಕೆಂದುಕೊಂಡನು. ತಾನು ಹಸಿವಿನಿಂದ ಬಲಗುಂದಿ ಸಾಯದಿರಬೇಕಾದರೆ, ಹೇಗಾದರೂ ಮಾಡಿ ಈ ಬಿಸಿನೀರಿನ ಪ್ರವಾಹವನ್ನು ದಾಟದೆ ತಪ್ಪದು. ಹಣ್ಣುಗಳ ಭಾರದಿಂದ ಬಗ್ಗಿದ ಮರಗಳೆಲ್ಲಾ ನದಿಯ ಆಚೆಯ ಬದಿಯಲ್ಲೇ ಇವೆ.

ಏನು ಮಾಡುವುದೆಂದು ಚಂದ್ರವರ್ಮನು ಆಲೋಚಿಸಿಕೊಂಡಿರುವಾಗ, ಒಂದು ಮಹಾಸರ್ಪವು ತಾಳೆಯ ಮರದ ಹಾಗೆ ನೆಟ್ಟಗೆ ಎದ್ದಿತು, ಇದಾವ ಸರ್ಪವಪ್ಪ ? ಕಾಲನಾಗನ ಸಂಬಂಧದ್ದೇ ?

ಆಮೇಲೆ ಅದು ತನ್ನ ತಲೆಯ ಭಾಗವು ನದಿಯ ಆಚೆಯ ಕಡೆಗೆ ಬೀಳುವಂತೆ ವಾಲಿಕೊಂಡಿತು. ಹಾಗೆಯೇ ಮುಂದೆ ಮುಂದೆ ಹೋಗಿ, ಬಾಲದ ಭಾಗವನ್ನು ಕದಲಿಸಿ ಮುಂದೆ ತಳ್ಳಿಕೊಂಡಿತು.

ಅದೇ ಸಮಯವನ್ನು ಕಾದುಕೊಂಡಿದ್ದಂತೆ ನಾಲ್ಕಾರು ಕೋತಿಗಳು ಕೀಚು ಕೀಚೆನ್ನುತ್ತ ಮರಗಳಿಂದ ಕೆಳಗಿಳಿದು, ನದಿಯನ್ನು ದಾಟಲು ಸಂಕದಂತೆ ಏರ್ಪಟ್ಟ ಸರ್ಪದ ಮೇಲೆ ನಡೆದು ಆಚೆಯ ಕಡೆಗೆ ಓಡತೊಡಗಿದುವು.

ಅಷ್ಟು ನೋಡಿದ ಮೇಲೆ ತಾನು ಈ ಬಿಸಿನೀರಿನ ನದಿಯನ್ನು ದಾಟಬೇಕಾದರೆ ಆ ಕೋತಿಗಳ ಹಾಗೆ ಸಾಹಸ ಮಾಡಲೇಬೇಕು ಎಂದು ಚಂದ್ರವರ್ಮನಿಗೆ ತೋರಿತು. ಆ ಹೆಬ್ಬಾವಿನ ಅಗಲವಾಗಿದ್ದ ನಸೆನಸೆಯಾದ ಬೆನ್ನಿನ ಮೇಲ ಜಾರಿ ಬೀಳದಂತೆ ಓಡಬೇಕಾದುದು ಸಾಮಾನ್ಯ ಕೆಲಸವಲ್ಲವೆಂದು ಗೊತ್ತಾಯಿತು. ಹಾಗೆ ಓಡುವಾಗ ಅದು ತನ್ನ ಶರೀರವನ್ನು ಹಿಂದಕ್ಕೆ ಎಳೆದುಕೊಂಡರೆ ತನ್ನ ಗತಿ ಮುಗಿದೇ ಹೋಗುತ್ತದೆಂತಲೂ ಅವನಿಗೆ ಗೊತ್ತು. ಹೀಗೆಲ್ಲ ಅಂದುಕೊಳ್ಳುತ್ತ ಚಂದ್ರವರ್ಮನು, ಬೇಗ ಬೇಗನ ಹೋಗಿ ಆ ಬೃಹತ್ ಶರೀರದ ಹಾವಿನ ಬೆನ್ನ ಮೇಲ ಹಾರಿ, ಕೋತಿಗಳ ಹಿಂದೆ ಆಚೆಯ ತೀರಕ್ಕೆ ಓಡತೊಡಗಿದನು. (ಇನ್ನೂ ಇದೆ)






# ಮಂತ್ರಶಕ್ತಿಗಳು

ರಾಜಾ ತ್ರಿವಿಕ್ರಮನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳಲಾಗದ ಬೇತಾಳವು ಶವದೊಳಗೇ ಇದ್ದು ಮರದ ಕೊಂಬೆಯಲ್ಲಿ ನೇತಾಡಿಕೊಂಡಿರಲು, ಮತ್ತೆ ಬಂದ ತ್ರಿವಿಕ್ರಮನು ಅದನ್ನು ಮರದಿಂದ ಕೆಳಗಿಳಿಸಿ ತನ್ನ ಹೆಗಲ ಮೇಲೆ ಹೊತ್ತುಕೊಂಡು, ಮೌನಮುದ್ರೆಯಿಂದ ಸ್ಮಶಾನದ ದಾರಿ ಹಿಡಿದು ಸಾಗಿದನು. ಆಗ ಶವದ ಬಾಯಿಯ ಮೂಲಕ ಬೇತಾಳವು, "ಎಲೈ ಮಹಾರಾಜನೇ, ಈ ಅರ್ಧ ರಾತ್ರಿಯ ಹೊತ್ತಿನಲ್ಲಿ ಸುಖಕರವಾದ ಶಯನಾಗಾರದಲ್ಲಿ ಹಂಸತೂಲಿಕಾ ತಲ್ಪದ ಮೇಲೆ ನಿದ್ರಿಸಿಕೊಂಡಿರುವುದನ್ನು ಬಿಟ್ಟು, ಭೀತಿ ಹುಟ್ಟಿಸುವ ಈ ಶ್ಮಶಾನದಲ್ಲಿ ಯಾರ ಒಳಿತಿಗಾಗಿ ಹೀಗೆ ತಿರುಗುವಿಯೋ ನನಗೆ ಅರ್ಥವಾಗುವುದಿಲ್ಲ. ಸಾಧಾರಣವಾಗಿ ರಾಜರು ಸ್ವಾರ್ಥಪರರಾಗಿರುತ್ತಾರೆ. ತನಗೆ ಉಪಕಾರ ಮಾಡಿದ ಎಂತಹ ಉತ್ತಮನಿಗಾದರೂ, ತನ್ನ ಹಿತಕ್ಕಾಗಿ ಕೇಡು ಬಗೆದು ಬಿಡಲು ರಾಜನು ಹಿಂದು ಮುಂದು ನೋಡಲಾರನು. ಒಂದು ವೇಳೆ ನೀನು ನಿನ್ನ ಸ್ವಾರ್ಥಕ್ಕಾಗಿಯೇ ಇಷ್ಟೆಲ್ಲಾ ಕಷ್ಟಗಳನ್ನು ಸಹಿಸಿಕೊಂಡಿರುವಿಯೊ ? ಅದು ನಿಜ

ಬೇತಾಳಕಥೆಗಳು?...



ವಾದರೆ ನಿನ್ನಂತಹನೇ ಆದ ಒಬ್ಬ ರಾಜನ ಕಥೆ ಹೇಳುತ್ತೇನೆ, ಕೇಳುತ್ತಾ ನಡೆದರೆ ಶ್ರಮ ತಿಳಿಯು ಲಾರದು. ನಿನ್ನ ತಿಳುವಳಿಕೆಗೂ ಸಹಾಯವಾದೀತು" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಹಿಂದೆ ಶಂಬರನೆಂಬೊಬ್ಬ ಮಾಂತ್ರಿಕನಿದ್ದನು. ಅವನು ದಿನನಿತ್ಯ ಸೂರ್ಯೋದಯವಾಗುವಾಗ ನದಿಯಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ, ನದೀ ತೀರದಲ್ಲಿದ್ದೊಂದು ಆಲದ ಮರದ ಬುಡದಲ್ಲಿ ತನ್ನ ನಿತ್ಯ ಪೂಜೆಯನ್ನು ಮುಗಿಸುವನು. ಒಂದು ದಿನ ಅವನು ತನ್ನ ಪೂಜೆ ಮುಗಿಸಿ, ಹೊರಡಲಿರು ವಾಗ ಒಬ್ಬ ವ್ಯಕ್ತಿ ನೇರಾಗಿ ಅಲ್ಲಿಗೇ ಬಂದನು. ಅವನ ವೇಷಭೂಷಣಗಳನ್ನು ನೋಡಿದರೆ ಅವನೊಬ್ಬ ದೊಡ್ಡ ಮಾಂತ್ರಿಕನೆಂದು ಯಾರಾ ದರೂ ಊಹಿಸುವರು.

ಶಂಬರನು ಅವನ ಮುಖವನ್ನು ಆಶ್ಚರ್ಯದಿಂದ ಕಣ್ಣರಳಿಸಿ ನೋಡುತ್ತಿರಲು, ಬಂದವನು ಮುಗುಳು ನಗುತ್ತಾ, "ಇಲ್ಲಿ ಶಂಬರನೆಂಬ ಮಂತ್ರಗಳನ್ನೆಲ್ಲ ಕಲಿತವನು ಇರುವನಂತೆ. ಅದು ನೀನೇ ಏನು ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಶಂಬರನು ಕೋಪ ತಂದು ಕೊಂಡು, "ಮಂತ್ರಗಳನ್ನು ಕಲಿತವನಲ್ಲ, ಮಂತ್ರ ಶಾಸ್ತ್ರ ಪೂರಾ ಆಪೋಶನ ಮಾಡಿದವನು ನಾನು. ಈ ಸಂಗತಿ ಈ ರಾಜ್ಯದಲ್ಲಿ ಅನೇಕರಿಗೆ ಗೊತ್ತಿದೆ" ಎಂದನು.

"ಹಾಗೇನು ? ನಾನು ನೆರೆಯ ರಾಜ್ಯದವನು. ಅತ್ಯದ್ಭುತವಾದ ಮಂತ್ರಶಕ್ತಿಗಳನ್ನು ಸಾಧಿಸಿದವ ನೆಂದು ನಮ್ಮ ರಾಜ್ಯದವರಿಗೆಲ್ಲಾ ನಾನು ಪರಿಚಿತ ನಾಗಿದ್ದೇನೆ. ನನ್ನ ಹೆಸರು ದೇವಯ್ಯ" ಎಂದನು ಆ ಹೊಸಬ.

"ಒಂದೇ ಕಾಲದಲ್ಲಿ ಸಮಾನ ಶಕ್ತಿಯುಳ್ಳ ಇಬ್ಬರು ಮಾಂತ್ರಿಕರಿರುವುದು ಸಾಧ್ಯವಿಲ್ಲ" ಎಂದನು ಶಂಬರ.

"ಆ ಮಾತು ನಿಜ. ಹಾಗಾದರೆ ಸುಮ್ಮನಿದ್ದು ಪ್ರಯೋಜನವಿಲ್ಲ. ನನಗಿಂತಲೂ ಹೆಚ್ಚಿನ ಶಕ್ತಿ ಗಳುಳ್ಳವನೆಂದು ನೀನು ನಿರೂಪಿಸಬಲ್ಲೆಯಾ ?" ಎಂದು ಕೇಳಿದನು ದೇವಯ್ಯ.

"ನಿರೂಪಿಸಬಲ್ಲೆನು. ನಾನು ಮನಸ್ಸು ಮಾಡಿದರೆ ಪ್ರಜೆಗಳಿಗೆ ಕುಡಿಯಲು ಒಂದು ಬೊಟ್ಟು ನೀರು ಕೂಡಾ ಸಿಗದ ಹಾಗೆ ಮಾಡಿಬಿಟ್ಟೇನು" ಎಂದನು ಶಂಬರ ಖಂಡಿತ ಸ್ವರದಲ್ಲಿ.

"ನಾನು ಮರುಕ್ಷಣದಲ್ಲೇ ನೀರನ್ನು ಹುಟ್ಟಿಸಿ, ಆ ಪ್ರಜೆಗಳ ಪ್ರಾಣವನ್ನು ಕಾಪಾಡಿ ಬಿಡುತ್ತೇನೆ" ಎಂದನು ದೇವಯ್ಯ.

ಆ ಮಾತು ಕೇಳಿದ ಕೂಡಲೇ ಶಂಬರನಿಗೆ ಬಹಳ ಪೌರುಷ ಬಂದುಬಿಟ್ಟಿತು.

"ನನ್ನನ್ನು ನಿನಗಿಂತ ಕಡಿಮೆಯವನೆಂದು ತಿಳಿಯ ಬೇಡ. ಹುಲ್ಲುಕಡ್ಡಿ ಕೂಡಾ ಬೆಳೆಯದ ಮರು



ಭೂಮಿಯನ್ನು ಹಚ್ಚಗಿನ ಸುಕ್ಷೇತ್ರವಾಗಿ ಮಾಡ ಬಲ್ಲವನು ನಾನು" ಎಂದನು ಶಂಬರ.

"ಓಸ್! ಅಷ್ಟೇತಾನೇ? ನಾನು ಅದನ್ನು ಕ್ಷಣ ಮಾತ್ರದಲ್ಲಿ ಭಸ್ಮಮಾಡಿ ಹಾಕುವವನು" ಎಂದನು ದೇವಯ್ಯ.

ಶಂಬರನು ಬೇಸತ್ತು, "ಇಷ್ಟೆಲ್ಲಾ ಬರಿಮಾತು ಏತಕ್ಕೆ? ನನ್ನ ಅದ್ಭುತ ಶಕ್ತಿಗಳಲ್ಲಿ ನಿನಗೆ ನಂಬುಗೆ ಬರಲು ಏನು ಮಾಡಬೇಕೆಂದು ಹೇಳಿಬಿಡು. ಈ ಕ್ಷಣದಲ್ಲೇ ನನ್ನ ಶಕ್ತಿಯನ್ನು ನಿರೂಪಿಸಿ ಬಿಡುತ್ತೇನೆ" ಎಂದನು.

ದೇವಯ್ಯ ಶಾಂತನಾಗಿಯೇ "ನೀನು ನಿಜಕ್ಕೂ ಅಷ್ಟು ದೊಡ್ಡ ಮಂತ್ರಗಾರನಾದರೆ, ದೀರ್ಘರೋಗಗಳಿಂದ ನರಳಿಕೊಂಡಿರುವವರಿಗೆ ರೋಗಗಳಿಂದ ಮುಕ್ತರಾಗುವ ಹಾಗೆ ಮಾಡುವಿಯಾ?" ಎಂದು ಕೇಳಿದನು.

ಕೂಡಲೇ ಶಂಬರನು, "ಓ! ಹಾಗೆಯೇ ಮಾಡಬಲ್ಲೆನು" ಎಂದನು.

"ನೀರನ್ನು ಸೃಷ್ಟಿಸುವೆಯಾ?" ಎಂದು ಕೇಳಿದನು ದೇವಯ್ಯ.

ಅದನ್ನೂ ಮಾಡುವೆನೆಂದು ಶಂಬರನು ತಲೆಯಾಡಿಸಿದನು.

ದೇವಯ್ಯನು ಒಂದು ಕ್ಷಣ ತಾಳಿ, "ಮಾನವರಲ್ಲಿ ಯಾರು ಒಳ್ಳೆಯ ಬುದ್ಧಿಯುಳ್ಳವರು, ಯಾರು ದ್ರೋಹಬುದ್ಧಿಯುಳ್ಳವರು ಎಂಬುದನ್ನು ಮಂತ್ರಶಕ್ತಿಯಿಂದ ಅರಿಸಿ ಹೇಳಲು ನಿನಗೆ ಸಾಧ್ಯವೆ?" ಎಂದು ಕೇಳಿದನು.

ಅದು ಕೂಡಾ ತನ್ನಿಂದಾಗುವುದೆಂದು ಹೇಳಿದನು ಶಂಬರ.

"ನಿನ್ನ ಇದಿರಿನಲ್ಲಿರುವವರ ಮನಸ್ಸಿನೊಳಗೆ ಏನಿದೆ ಎಂಬುದನ್ನು ಸರಿಯಾಗಿ ಕಂಡು ಹಿಡಿದು ಹೇಳಲು ನಿನ್ನ ಮಂತ್ರಕ್ಕೆ ಶಕ್ತಿ ಇದೆಯೇ?" ಎಂದು ಕೇಳಿದನು ದೇವಯ್ಯ. ಶಂಬರನು ಬೇಸರದಿಂದ ಹುಬ್ಬು ಸುರುಗಿಸಿ, ಆ ಕೆಲಸ ಕೂಡಾ ಮಾಡಬಲ್ಲೆನೆಂದು ಹೇಳಿ "ನೀನು ನನ್ನನ್ನು ಇಷ್ಟೆಲ್ಲ ವಿಧವಾಗಿ ಪರೀಕ್ಷಿಸಲು ನೋಡುವಿಯೇನು? ನಾನು ಮಾಡವೆನೆಂದು ಹೇಳಿದ್ದುದನ್ನೆಲ್ಲಾ ನೀನು ನಿನ್ನ ಮಂತ್ರಶಕ್ತಿಯಿಂದ ಮಾಡಬಲ್ಲೆಯಾ? ಸುಮ್ಮನೆ ನನ್ನನ್ನು ಮಾತ್ರ ಕೇಳುವಿಯಾ?" ಎಂದು ಕೇಳಿದನು.

"ಓ! ತಪ್ಪದೆ ಮಾಡಬಲ್ಲೆನು" ಎಂದನು ದೇವಯ್ಯ.

"ಬರಿಮಾತಿನಿಂದ ಪ್ರಯೋಜನವೇನಿಲ್ಲ. ಪಂಥ ಕಟ್ಟು" ಎಂದನು ಶಂಬರ.

"ಏನು ಪಂಥವೆಂದು ನೀನೇ ಹೇಳು" ಎಂದು ದೇವಯ್ಯ ಹೇಳಲು, "ಅದನ್ನೂ ನೀನೇ ಹೇಳಿಬಿಡು. ನಾನು ಯಾವುದಕ್ಕೂ ಹಿಂಜರಿಯುವವನಲ್ಲ. ಎಂತಹ ಪಂಥಕ್ಕಾದರೂ ನಾನು ಸಿದ್ಧನೇ" ಎಂದನು ಶಂಬರ. ದೇವಯ್ಯನು ಕ್ಷಣ ಮಾತ್ರ ಆಲೋಚಿಸಿ,

"ಸೋತು ಹೋದವನು ಗೆದ್ದವನಿಗೆ ದಾಸೋಹಂ ಅನ್ನಬೇಕು. ಆಮೇಲೆ ಅವನು ಮಂತ್ರಶಕ್ತಿಗಳ ಗೊಡವೆಗೇ ಹೋಗಬಾರದು. ಒಪ್ಪುವೆಯಾ ?" ಎಂದನು.

"ಒಪ್ಪುತ್ತೇನೆ, ಹಾಗೇ ಆಗಲಿ" ಎಂದನು ಶಂಬರ.

"ಅದರಲ್ಲೊಂದು ಸಣ್ಣ ಷರತ್ತು. ಮೊದಲು ನಿನ್ನ ಮಂತ್ರಶಕ್ತಿಗಳನ್ನು ಪ್ರದರ್ಶಿಸಬೇಕು. ಆದಾದ ನಂತರವೇ ನನ್ನ ಅದ್ಭುತಗಳನ್ನು ಪ್ರದರ್ಶಿಸುತ್ತೇನೆ" ಎಂದನು ದೇವಯ್ಯ.

ಇದನ್ನೂ ಶಂಬರನು ಒಪ್ಪಿದನು.

ಆಮೇಲೆ ಆ ಮಂತ್ರಗಾರರಿಬ್ಬರೂ ಕೂಡಿ ಅಲ್ಲಿಂದ ಹೊರಟು ನಡು ಮಧ್ಯಾಹ್ನದ ಹೊತ್ತಿಗೆ ಒಂದು ಗ್ರಾಮವನ್ನು ತಲಪಿದರು. ಎಷ್ಟೋ ಕಾಲದಿಂದ ಅಲ್ಲಿ ಮಳೆ ಬಾರದುದರಿಂದ ವ್ಯವಸಾಯವಿಲ್ಲದೆ ಹೊಲ ಗದ್ದೆಗಳೆಲ್ಲ ಹಡಲು ಬಿದ್ದಿದ್ದುವು, ಕೆರೆಬಾವಿಗಳೆಲ್ಲ ಒಣಗಿ ಹೋಗಿದ್ದುವು. ಕುಡಿಯುವ ನೀರಿಲ್ಲದೆ ಜನರೆಲ್ಲ ನಾನಾ ಪಾಡುಪಟ್ಟು ಕೊಂಡಿದ್ದರು. ಎಲ್ಲರಿಗೂ ಅದೇ ದೊಡ್ಡ ಹೊರೆ ಚಿಂತೆಯಾಗಿತ್ತು.

"ಸರಿ. ಈ ಪ್ರಾಂತದಲ್ಲಿ ನಿನ್ನ ಮಂತ್ರಶಕ್ತಿಗಳನ್ನು ಪ್ರದರ್ಶಿಸು. ನೀರು ಬರುವ ಹಾಗೆ ಮಾಡು ನೋಡುತ್ತೇನೆ" ಎಂದನು ದೇವಯ್ಯ.

ಶಂಬರನು ಸ್ವಲ್ಪಹೊತ್ತು ಕಣ್ಣು ಮುಚ್ಚಿಕೊಂಡು ಏನೋ ಸ್ಮರಣೆ ಮಾಡಿದನು. ತರುವಾಯ ಬಲಕೈಯ ತೋರು ಬೆರಳನ್ನು ಗಾಳಿಯಲ್ಲಿ ತಿರುಗಿಸಿ ಕೆಲವು ಮುದ್ರೆಗಳನ್ನು ಬರೆದಂತೆ ಮಾಡಿ ಕಣ್ಣುಗಳಿಗೆ ಒತ್ತಿಕೊಂಡನು. ಮರು ನಿಮಿಷದಲ್ಲಿ ನಾಲ್ಕು ಸುತ್ತಲೂ ಕಾರ್ಮೋಡಗಳು ಎದ್ದು ಬಂದು ಮಿಂಚು ಗುಡುಗು ಸಿಡಿಲುಗಳೆದ್ದುವು. ಒಮ್ಮೆಗೇ ಪಟಪಟ ಉದುರತೊಡಗಿದ ಮಳೆ ಕುಂಭವೃಷ್ಟಿಯಾಗಿ ಜೋರೋ ಎಂದು ಸುರಿಯಿತು.

ವಿಜಯಗರ್ವದಿಂದ ದೇವಯ್ಯನನ್ನು ನೋಡಿ ತಲೆಯಾಡಿಸಿದನು ಶಂಬರ. ದೇವಯ್ಯನು ಅವನನ್ನು ಮೆಚ್ಚಿಕೊಂಡು, "ದೊಡ್ಡ ಮಂತ್ರವಾದಿಯೇ ನಿಜ.



ಮೊದಲು ನಿನ್ನ ವಿಷಯದಲ್ಲಿ ಏನೋ ಅಂದು ಕೊಂಡೆನಾದರೂ, ನೀನು ಸ್ವಲ್ಪಮಟ್ಟಿಗೆ ಮಂತ್ರ ಶಕ್ತಿಯುಳ್ಳವನೆ ಎಂಬುದು ಈಗ ತಿಳಿಯಿತು" ಎಂದನು ನಗುತ್ತಾ.

"ಏನಂದೆ ? ನನ್ನದು ಸ್ವಲ್ಪಮಟ್ಟಿಗೆ ಮಾತ್ರದ ಮಂತ್ರ ಶಕ್ತಿಯೋ ? ನೋಡುತ್ತೇನೆ. ನಿನ್ನ ಮಂತ್ರ ಶಕ್ತಿಯಿಂದ ಮಳೆ ಸುರಿಸು" ಎಂದನು ಶಂಬರ.

ದೇವಯ್ಯನು ಕಿರುನಗೆಯೊಂದಿಗೆ, "ಷರತ್ತಿನ ಸಂಗತಿ ಮರೆತು ಹೋಯಿತೇನು ? ಮೊದಲು ನಿನ್ನ ಮಂತ್ರಶಕ್ತಿಗಳನ್ನೆಲ್ಲ ಪ್ರದರ್ಶಿಸಬೇಕೆಂಬ ನಿಯಮ ವಿದೆಯಷ್ಟೆ ? " ಎಂದನು.

"ಸರಿ. ಹಾಗೇ ಆಗಲಿ" ಎಂದನು ಶಂಬರ.

"ರಾಜಧಾನೀ ನಗರಕ್ಕೆ ಹೋಗೋಣ. ಈ ದೇಶ ವನ್ನಾಳುವ ರಾಜನ ಮಗಳು ಬಹಳ ಕಾಲದಿಂದ ಗುಣವಾಗದ ರೋಗದಿಂದ ಹಾಸಿಗೆ ಹಿಡಿದಿದ್ದಾಳೆಂದು ಕೇಳಿದ್ದೇನೆ. ನಿನ್ನ ಮಂತ್ರಶಕ್ತಿಯಿಂದ ಅವಳ ರೋಗ ಗುಣಪಡಿಸಿ ಬಿಡು" ಎಂದನು ದೇವಯ್ಯ.

ಹಾಗೆಯೇ ಇಬ್ಬರೂ ರಾಜಧಾನಿಗೆ ಹೋಗಿ ಮಹಾರಾಜನನ್ನು ದರ್ಶನಮಾಡಿದರು. ಸಂಗತಿ ತಿಳಿದು ರಾಜನು ಅವರನ್ನು ತನ್ನ ಕುಮಾರಿ ಮಲಗಿರುವ ಕೋಣೆಗೆ ಕರೆದುಕೊಂಡು ಹೋದನು. ಶಂಬರನು ರಾಜಕುಮಾರಿಯ ಮಂಚದ ಪಕ್ಕದಲ್ಲಿ ನಿಂತುಕೊಂಡು, ತನ್ನ ತೋರುಬೆರಳನ್ನು ಕೆಲವು ಮುದ್ರಾಕಾರಗಳಾಗಿ ಗಾಳಿಯಲ್ಲಿ ತಿರುಗಿಸಿ ತನ್ನ ಕಣ್ಣುಗಳಿಗೆ ತಾಗಿಸಿಕೊಂಡನು. ಆಮೇಲೆ ಒಂದು ನಿಮಿಷ ಹೊತ್ತು ಏನೋ ತನ್ನೊಳಗೇ ಜಪಿಸಿಕೊಂಡು ಸ್ಮರಿಸಿದನು. ಎಲ್ಲರೂ ಕೌತುಕದಿಂದ ರಾಜಕುಮಾರಿಯನ್ನೂ ಅವನನ್ನೂ ನೋಡುತ್ತಿದ್ದರು.

ಮತ್ತೊಂದು ನಿಮಿಷದಲ್ಲಿ ರಾಜಕುಮಾರಿ ಮೈಕೈ ಅಲುಗಾಡಿಸಿ, ಪ್ರಕಾಶವಂತವಾದ ಮುಖದಿಂದ, ಎಲ್ಲರನ್ನೂ ನೋಡಿ ನಗುತ್ತಾ ಎದ್ದು ಕುಳಿತಳು. ಬಹಳ ಕಾಲದಿಂದಲೂ ಅವಳನ್ನು ಪೀಡಿಸುವ ವೈದ್ಯರಿಗೆ ಗೊತ್ತಾಗದ ರೋಗ ಮಟಮಾಯವಾಗಿ ಹೋಗಿ ಚುರುಕಾಗಿರುವ ಮಗಳನ್ನು ನೋಡಿ,





ರಾಜನು ಬಹಳ ಸಂತೋಷಪಟ್ಟನು. ಆಗ ದೇವಯ್ಯನು ರಾಜನೊಂದಿಗೆ ಸ್ವಲ್ಪ ಹೊತ್ತು ಏಕಾಂತವಾಗಿ ಮಾತಾಡಿ, ಶಂಬರನ ಬಳಿಗೆ ಬಂದು "ಮಹಾರಾಜರಿಗೆ ತನ್ನ ಪರಿವಾರದಲ್ಲಿ ಕೆಲವು ದ್ರೋಹಿಗಳಿರುವರೆಂದು ಅನುಮಾನವಾಗಿದೆಯಂತೆ. ಅವರು ಯಾರೆಂದು ನಿನ್ನ ಮಂತ್ರಶಕ್ತಿಯಿಂದ ಹೇಳು ನೋಡೋಣ" ಎಂದನು.

ಶಂಬರನು ರಾಜನ ಪರಿವಾರದವರನ್ನೂ ಸೈನಿಕರನ್ನೂ ಬರಮಾಡಿಸಿ, ಅವರನ್ನೆಲ್ಲಾ ಪರಿಶೀಲಿಸಿ ನೋಡಿ ಹೋಗಲು ಹೇಳಿದನು. ಆಮೇಲೆ ಕಣ್ಣು ಮುಚ್ಚಿಕೊಂಡು, ತೋರು ಬೆರಳಿನ ಸಂಜ್ಞೆಯ ಮೂಲಕ ದ್ರೋಹಿಗಳ ಕಡೆಗೆ ಆ ಬೆರಳನ್ನು ನೀಡಿ ನೀಡಿ ದೇವಯ್ಯನಿಗೆ ತೋರಿಸಿದನು. ದೇವಯ್ಯನ ಮೂಲಕ ಅದನ್ನು ತಿಳಿದ ರಾಜನು, ಆ ತಂತ್ರಗಾರ ದ್ರೋಹಿಗಳನ್ನು ಭಟರ ಮೂಲಕ ಬಂಧಿಸಿ ಕಾರಾಗಾರದಲ್ಲಿ ಹಾಕಿಸಿದನು.

ತರುವಾಯ ರಾಜನು ಸಭೆ ನಡೆಸಿಕೊಂಡಿರುವಾಗ ದೇವಯ್ಯನು ಶಂಬರನ ಮಂತ್ರಶಕ್ತಿಗಳನ್ನು ಹೊಗಳಿ ಮಾತಾಡಿ, ಶಂಬರನೊಂದಿಗೆ, "ನೀನು ನಮ್ಮ ಷರತ್ತಿನ ಪ್ರಕಾರ ಇನ್ನೊಂದುಸಾರಿ ಮಾತ್ರ ನಿನ್ನ ಮಂತ್ರಶಕ್ತಿಯನ್ನು ಪ್ರದರ್ಶಿಸಬೇಕಾಗಿದೆ. ಅದು ಹೊರಗಿನವರ ವಿಷಯವಲ್ಲ. ನೀನು ಅದನ್ನು ಕೂಡಾ ಮಾಡಿಬಿಟ್ಟರೆ ನನ್ನ ಮಂತ್ರಶಕ್ತಿಗಳನ್ನು ತೋರಿಸುತ್ತೇನೆ. ಈಗ ನಾನು ಮನಸ್ಸಿನಲ್ಲಿ ಏನು ಅಂದುಕೊಂಡಿದ್ದೇನೆಂಬುದನ್ನು ನಿನ್ನ ಮಂತ್ರಶಕ್ತಿಯಿಂದ ಕಂಡುಹಿಡಿದು ಹೇಳು" ಎಂದನು.

ಶಂಬರನು ಒಂದು ನಿಮಿಷ ಕಣ್ಣು ಮುಚ್ಚಿಕೊಂಡು, ತೋರುಬೆರಳಿನಲ್ಲಿ ಮುದ್ರೆ ಬರೆದು ಕಣ್ಣಿಗೆ ಒತ್ತಿ, ದೇವಯ್ಯನನ್ನು ಬಹು ರೌದ್ರದಿಂದ ನೋಡುತ್ತ, "ನಿನ್ನ ಮನಸ್ಸಿನಲ್ಲಿ ಏನೆಂದುಕೊಂಡಿರುವಿ ಎಂಬುದನ್ನು ಹೇಳಲೇನು? ನಾನು ನಿಜವನ್ನು ಹೇಳಿದರೆ ಅಲ್ಲವೆಂದು ನಾನು ಸೋತೆನೆಂದು ಹೇಳಿಸಬೇಕೆಂದಿರುವಿ. ಆಮೇಲೆ ನನ್ನ ತೋರುಬೆರಳನ್ನು ಖಂಡಿಸಿ ನನಗೆ ಮಂತ್ರಶಕ್ತಿಗಳು ಇಲ್ಲದಂತೆ ಮಾಡಬೇಕೆಂದಿರುವಿ. ಎಂತಹ ಘೋರ ಆಲೋಚನೆ ನಿನ್ನದು!" ಎಂದನು.

ಆ ಮಾತುಗಳನ್ನು ಕೇಳಿದ ಕೂಡಲೇ ದೇವಯ್ಯನು ಬೆರಗಾದನು. ಶಂಬರನು ಕೋಪೋದ್ರೇಕದಿಂದ ಹಲ್ಲು ಕಡಿಯುತ್ತ, "ದುಷ್ಟಾ! ನೀನು ಯಾರೆಂದು ಕೂಡಾ ನನಗೆ ಗೊತ್ತಾಗಿ ಹೋಯಿತು. ನೀನು ನನ್ನಂಥ ಮಾಂತ್ರಿಕನೂ ಅಲ್ಲ. ನಿನ್ನ ಹೆಸರು ದೇವಯ್ಯನೂ ಅಲ್ಲ. ದೇವದತ್ತನೆಂದು ನಿನ್ನ ಹೆಸರು. ಈ ದೇಶದ ಮಂತ್ರಿ ನೀನು. ಯಾವ ಔಷಧಕ್ಕೂ ಗುಣವಾಗದ ರಾಜಕುಮಾರಿಯ ರೋಗವನ್ನು ನನ್ನಿಂದ ಗುಣಪಡಿಸಲಿಕ್ಕಾಗಿ ಈ ಕಪಟ ನಾಟಕ ಮಾಡಿರುವಿ. ಬಹು ದೊಡ್ಡ ಮೋಸಗಾರನು ನೀನು!" ಎಂದನು.

ಉತ್ತರಕ್ಷಣದಲ್ಲಿ ರಾಜನ ಸಂಜ್ಞೆಯಿಂದ ನಾಲ್ವರು ಬಲಿಷ್ಠರಾದ ಭಟರು ಶಂಬರನ ಮೇಲೆ ಬಿದ್ದು ಮೊದಲು ಅವನ ಕೈಗಳನ್ನು ಬೆನ್ನಿಗೆ ಬಿಗಿದು ಕಟ್ಟಿದರು. ಆಮೇಲೆ ಅವನ ತಲೆಯನ್ನು ಒಂದು ಗೋಣೀ ಚೀಲದಲ್ಲಿ ತೂರಿಸಿ ಹಗ್ಗಗಳಿಂದ ಬಿಗಿದರು.

"ಇವನನ್ನು ಕೂಡಲೇ ವಧ್ಯಸ್ಥಾನಕ್ಕೆ ಒಯ್ದು ಶಿರಚ್ಛೇದ ಮಾಡಿ ಬಿಡಿರಿ" ಎಂದು ರಾಜನು ಭಟರಿಗೆ ಆಜ್ಞೆ ಮಾಡಿದನು.

ಭಟರು ಶಂಬರ ಮಾಂತ್ರಿಕನನ್ನು ಅಲ್ಲಿಂದ ಎಳೆದುಕೊಂಡು ಹೋದರು. ಆಮೇಲೆ ಯಾರೂ ಅವನನ್ನು ನೋಡಲಿಲ್ಲ.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಶಂಬರನಂಥ ಮಹಾಮಂತ್ರವಾದಿಗೆ ರಾಜನು ಶಿರಚ್ಛೇದದ ಶಿಕ್ಷೆ ವಿಧಿಸಿದ್ದು ಅನ್ಯಾಯವಲ್ಲವೆ? ಯಾವ ಔಷಧಕ್ಕೂ ಗುಣವಾಗದ ರಾಜಕುಮಾರಿಯ ದೀರ್ಘ ವ್ಯಾಧಿಯನ್ನು ಅವನು ತನ್ನ ಮಂತ್ರಶಕ್ತಿಯಿಂದ ಗುಣಪಡಿಸಿದ್ದಾನೆ. ಅವನಿಗೆ ಸಿಟ್ಟು ಬಂದದ್ದು ರಾಜನ ಮೇಲೆಯೂ ಅಲ್ಲ, ಅವನಿಗೆ ಸಿಟ್ಟು, ಪ್ರತಿ ಮಾಂತ್ರಿಕನೆಂದು ಸುಳ್ಳು ಹೇಳಿದ ದೇವದತ್ತನ ಮೇಲೆ. ಹಾಗಿರುವಾಗ ರಾಜನು ಶಂಬರನನ್ನು ಘನ ರೀತಿಯಲ್ಲಿ ಸತ್ಕರಿಸುವುದನ್ನು ಬಿಟ್ಟು ಹೀಗೆ ಮರಣಶಿಕ್ಷೆ ವಿಧಿಸುವುದೆಂದರೇನು? ಈ ಸಂದೇಹಕ್ಕೆ ತಕ್ಕ ಸಮಾಧಾನವು ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದು ಹೋಳಾಗುತ್ತದೆ" ಎಂದು ಸುಮ್ಮನಾಯಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು:

"ರಾಜನಾದವನು ತನ್ನ ಹಾಗು ತನ್ನ ಕುಟುಂಬದ ಕ್ಷೇಮದೊಂದಿಗೆ ದೇಶದ ಪ್ರಜೆಗಳ ಕ್ಷೇಮವನ್ನು ಕೂಡಾ ನೋಡಬೇಕಾಗಿರುತ್ತದೆ. ಶಂಬರನಿಗಿರುವ ಮಂತ್ರಶಕ್ತಿಗಳು ಸಾಟಿಯಿಲ್ಲದಂಥವೆಂದು ನಿರೂಪಿಸಲ್ಪಟ್ಟಿವೆ. ಮನಸ್ಸು ಮಾಡಿದರೆ ಅವನು ಆ ಶಕ್ತಿಗಳನ್ನು ಜನರ ಒಳಿತಿಗಾಗಿಯೂ, ಕೆಡುಕಿಗಾಗಿಯೂ ತನ್ನಿಷ್ಟದಂತೆ ಉಪಯೋಗಿಸ ಬಲ್ಲವನು. ಅವನಿಗೆ ಈಗ ಮಂತ್ರಿಯ ಮೇಲೆ ಶತ್ರುಭಾವನೆ ಉಂಟಾಗಿದೆ. ಮಂತ್ರಿಯನ್ನು ಶತ್ರುವಾಗಿ ಭಾವಿಸುವವನು, ರಾಜನನ್ನು ಬಿಟ್ಟುಬಿಡುವನೆಂಬ ನಂಬುಗೆ ಏನಿದೆ? ಅಂತಹ ಅದ್ಭುತ ಮಂತ್ರಶಕ್ತಿಗಳುಳ್ಳವನು, ಎಂದಾದರೂ ಅಪಾಯದವನೇ ಆಗುವನು. ಇದನ್ನು ತಿಳಿದೇ ರಾಜನು ಅವನಿಗೆ ಶಿರಚ್ಛೇದದ ಶಿಕ್ಷೆ ಕೊಡಿಸಿದನು" ಎಂದನು.

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯನ್ನು ಹಿಡಿದು ನೇತಾಡಲು ತೊಡಗಿತು.



# ರಹಸ್ಯ

ರಾಮಪುರಕ್ಕೆ ಬರೀ ಉಟ್ಟ ಬಟ್ಟೆಯೊಂದಿಗೆ ಬಂದ ರಾಮಣ್ಣನು ಒಂದು ವರ್ಷದೊಳಗೆ ಒಂದು ಎಕರೆ ಹೊಲವನ್ನು ಸಂಪಾದಿಸಿದನು. ಮತ್ತೊಂದು ನಾಲ್ಕು ವರ್ಷಗಳಲ್ಲಿ ಆ ಗ್ರಾಮದ ಧನಿಕರೊಳಗೆ ತಾನೂ ಒಬ್ಬನೆನಿಸಿದನು.

ಅದೇ ಗ್ರಾಮದಲ್ಲಿರುವ ಶರಭಯ್ಯನಿಗೆ ರಾಮಣ್ಣನು ಇಷ್ಟು ಅಲ್ಪಾವಧಿಯಲ್ಲಿ ಹೇಗೆ ಧನಿಕನಾದನೆಂದು ಎಷ್ಟು ಯೋಚಿಸಿದರೂ ತಿಳಿಯಲಿಲ್ಲ.

ಕಡೆಗೆ ಆ ರಹಸ್ಯವೇನೆಂದು ಆತನನ್ನೇ ಕೇಳಿ ತಿಳಿಯಬೇಕೆಂದುಕೊಂಡು ಶರಭಯ್ಯನು ಕತ್ತಲೆ ಬೀಳುವ ಹೊತ್ತಿಗೆ ರಾಮಣ್ಣನ ಮನೆಗೆ ಹೋದನು.

ಆ ಸಮಯದಲ್ಲಿ ರಾಮಣ್ಣನು ಆಗತಾನೇ ಒಂದು ಚಿಕ್ಕ ಬುಡ್ಡಿ ದೀಪವನ್ನು ಬೆಳಗಿಸಿ ಗೋಡೆಯ ಗೂಡಿನಲ್ಲಿ ಇಡುತ್ತಿದ್ದನು.

ಅವನು ಶರಭಯ್ಯನನ್ನು ನೋಡಿದ ಕೂಡಲೇ ಆದರದಿಂದ ಮಾತಾಡಿಸಿ, "ಏನೋ ಮುಖ್ಯ ಕೆಲಸದ ಮೇಲೆ ಬಂದಿರೆಂದು ಕಾಣುತ್ತದೆ" ಎಂದನು.

"ಅಷ್ಟೇನೂ ಮುಖ್ಯ ಕೆಲಸವಲ್ಲ". ಎಂದು ಶರಭಯ್ಯನು ತಾನು ಬಂದ ಕೆಲಸವನ್ನು ಹೇಳಿ "ನಾವು ಒಂದೇ ಗ್ರಾಮದವರು ತಾನೇ ? ಆ ರಹಸ್ಯವೇನೆಂದು ನನಗಿಷ್ಟು ಹೇಳಬಾರದೇ ?" ಎಂದನು.

"ಇದರಲ್ಲಿ ರಹಸ್ಯವೇನಿದೆ ?" ಎಂದು ರಾಮಣ್ಣನು ಒಂದು ಚಿಕ್ಕ ಚಾಪೆ ತಂದು ಹಾಕಿ ಶರಭಯ್ಯನನ್ನು ಕುಳಿತುಕೊಳ್ಳಲು ಹೇಳಿ, ಬುಡ್ಡೀ ದೀಪವನ್ನು ನಂದಿಸಿ ಬಂದು ಶರಭಯ್ಯನ ಪಕ್ಕದಲ್ಲೇ ಕುಳಿತು. "ಇನ್ನು ಮಾತಾಡೋಣ" ಎಂದನು.

ಶರಭಯ್ಯ ಆಶ್ಚರ್ಯದಿಂದ "ಬೆಳಗುತ್ತಿದ್ದ ದೀಪವನ್ನು ಆರಿಸಿ ಬಂದಿರಿ. ಹಾಗೇಕೆ ಮಾಡಿದಿರೆಂದು ಗೊತ್ತಾಗಲಿಲ್ಲ. ಹೇಳುವಿರಾ ?" ಎಂದನು.

ರಾಮಣ್ಣನು ಸರ್ವ ಸಾಧಾರಣವೆಂಬಂತೆ, "ನಾವು ಹೀಗೆ ಆರಾಮವಾಗಿ ಕುಳಿತು ಮಾತಾಡಿಕೊಳ್ಳಲಿಕ್ಕೆ ಕೂಡಾ ಆ ಬುಡ್ಡಿ ದೀಪದ ಎಣ್ಣೆಯನ್ನು ಖರ್ಚು ಮಾಡಬೇಕೆನ್ನುವಿರಾ ?" ಎಂದು ಕೇಳಿದನು.

ಅದನ್ನು ಕೇಳಿದ ಕೂಡಲೇ ಶರಭಯ್ಯ ತಟಕ್ಕನೆ ಎದ್ದು, "ಸರಿ, ಗೊತ್ತಾಯಿತು. ನಾನು ಹೋಗಿ ಬರುತ್ತೇನೆ" ಎಂದನು.

"ಏನೋ ರಹಸ್ಯ ತಿಳಿಯೋಣವೆಂದು ಬಂದಿರಲ್ಲಾ ?" ಎಂದನು ರಾಮಣ್ಣ.

"ಆ ರಹಸ್ಯವು ನಿಮ್ಮ ಬಾಯಿಯಿಂದ ಬರುವ ಮೊದಲೇ ನನಗೆ ಗೊತ್ತಾಯಿತು" ಎಂದು ಹೇಳಿ ಶರಭಯ್ಯನು ಹೊರಟು ಹೋದನು.






# ಪೀಡಾಪರಿಹಾರ

**ಗೋ**ಪತಿ ಎಂಬ ವಿದ್ಯಾವಂತ ಯುವಕನಿಗೆ ಪಟ್ಟಣದಲ್ಲಿರುವ ಪ್ರಭುತ್ವ ಕಾರ್ಯಾಲಯದಲ್ಲಿ ಉದ್ಯೋಗ ಸಿಕ್ಕಿತು. ಅವನು ಬಹಳ ದಾಕ್ಷಿಣ್ಯದ ಮನುಷ್ಯ. ಮದುವೆಯಾಗಿತ್ತು. ಉದ್ಯೋಗ ಸಿಕ್ಕಿದುದರಿಂದ, ಹೆಂಡತಿಯನ್ನೂ ಕರೆದುಕೊಂಡು ಬಂದಿದ್ದನು. ವಿಶೇಷವೇನೆಂದರೆ ಅವನ ಹೆಂಡತಿ ಸುನಂದ ಕೂಡಾ ಬಹಳ ದಾಕ್ಷಿಣ್ಯದವಳೇ. ಗಂಡನ ಹತ್ತಿರವೂ ತುಂಬಾ ದಾಕ್ಷಿಣ್ಯಪಡುವಳು.

ಅವಳು ಸಂಸಾರಕ್ಕೆ ಬಂದ ಮೊದಲನೇ ದಿನವೇ ಆ ಗಂಡ ಹೆಂಡಿರ ದಾಕ್ಷಿಣ್ಯವು ಅವರವರೊಳಗೇ ವ್ಯಕ್ತವಾಯಿತು. ಅಡಿಗೇ ವಿಷಯದಲ್ಲಿ ಗಂಡ ಹೆಂಡಿರಿಬ್ಬರೂ ಒಬ್ಬರೊಡನೆ ಒಬ್ಬರು ಹೇಳಲು ದಾಕ್ಷಿಣ್ಯಪಟ್ಟರು. ಗೋಪತಿ ಮೇಲೆ ಕೆಳಗೆ ನೋಡುತ್ತ, ಹೆಂಡತಿಯೊಂದಿಗೆ, "ಹೊಸ ಜಾಗದಲ್ಲಿ ಅಡಿಗೆ ಮಾಡುವುದು ನಿನಗೆ ಕಷ್ಟವಾದೀತು. ಭೋಜನ ಮಂದಿರದಿಂದ ಊಟ ತಂದರೆ ಒಳ್ಳೇದೋ ಏನೋ ? ಮನೆ ಪಳುಗುವ ವರೆಗೆ ನಾಲ್ಕು ದಿನ ಹಾಗೆಯೇ ಮಾಡೋಣವೆ ?" ಎಂದು ಕೇಳಿದನು. ಗಂಡನ ಹತ್ತಿರ ಅಡಿಗೆಗೆ ಬೇಕಾದ ಸಾಮಾನುಗಳನ್ನು ತರುವಂತೆ ಹೇಳಲು ದಾಕ್ಷಿಣ್ಯಪಡುತ್ತ, ಸುನಂದ ಸಣ್ಣದನಿಯಿಂದ, "ನಿಮಗಿಷ್ಟವಾದ ಅಡಿಗೆ ಯಾವುದೋ ಗೊತ್ತಾದರೆ, ಅದಕ್ಕೆ ಬೇಕಾದ್ದು ತಂದರೆ ಅಡಿಗೆ ಮಾಡಲು ಕಷ್ಟವೇನೂ ಇಲ್ಲ. ಅಡಿಗೆ ಮಾಡಿ ಅಭ್ಯಾಸವಿದೆ" ಎಂದಳು.

ಹೀಗೆ ಹೇಗೋ ಒಂದು ವಿಧವಾಗಿ ಈ ದಾಕ್ಷಿಣ್ಯ ಸಂಕೋಚದ ದಂಪತಿಗಳ ಸಂಸಾರ ಪ್ರಾರಂಭವಾಯಿತು. ಅವಳು ಮಾಡಿದ್ದು ಹಿಡಿಸದಿದ್ದರೂ ಗೋಪತಿ ಸುಮ್ಮನಿರುವನು. ಅವಳೂ ಅಷ್ಟೇ. ಹಾಗೆಯೇ ಅವರ ಪಾಡಿಗೆ ಪಳಗಿಕೊಂಡರು.

ಒಂದುದಿನ ಸಾಯಂಕಾಲ ಅವರಿಬ್ಬರೂ ಪಟ್ಟಣದ ಕೊನೆಯಲ್ಲಿದ್ದ ಶಿವಾಲಯಕ್ಕೆ ಹೋಗಿ ಕತ್ತಲಾಗುವ ಹೊತ್ತಿಗೆ ತಿರುಗಿ ಬರುತ್ತಾ ಇದ್ದರು.

ಆಗ ದಾರಿಯಲ್ಲಿ ನಡೆಯಲಾಗದ ಸ್ಥಿತಿಯಲ್ಲಿ ನಡೆಯುತ್ತಿದ್ದ ಮುದುಕನೊಬ್ಬನು ಗೋಪತಿಯನ್ನು ನೋಡಿ ನಡುಗುವ ಸ್ವರದಲ್ಲಿ, "ಅಯ್ಯಾಪ್ಪಾ, ಕಣ್ಣು ಕತ್ತಲೆ ಬಂದು ಬಿದ್ದು ಹೋಗುವ ಹಾಗಿದ್ದೇನೆ. ಸ್ವಲ್ಪ ಕೈ ಹಿಡಿದು ನಡೆಯಿಸಿಕೊಂಡು ಹೋಗ್ತೀರಾ ? ನಿಮ್ಮ ಪುಣ್ಯ !" ಎಂದನು.

ಎಂ. ಕೆ. ಈಶ್ವರರಾವ್



ಗೋಪತಿಗೆ ಅಯ್ಯೋ ಪಾಪವೆನಿಸಿ, ಆ ಮುದುಕನಿಗೆ ತನ್ನ ಕೈಯ ಆಸರೆ ಕೊಟ್ಟು ನಡೆಯಿಸಿಕೊಂಡು ನಡೆಯತೊಡಗಿದನು. ಆಗ ಆ ದಾರಿಯಲ್ಲಿ ನಡೆಯುವ ಇಬ್ಬರು ದೊಡ್ಡ ಮನುಷ್ಯರು ಗೋಪತಿಯನ್ನು ನೋಡಿ ಕೋಪದಿಂದ, "ನೋಡಿದರೆ ಓದಿಕೊಂಡವನ ಹಾಗಿರುವಿ. ಸ್ವಲ್ಪವೂ ಜ್ಞಾನವಿಲ್ಲದಿದ್ದರೆ ಹೇಗೆ? ಮುದುಕ ತಂದೆಗೆ ಕೊಡುವ ಗೌರವ ಹೀಗೋ!" ಎಂದು ತುಚ್ಛೀಕಾರ ಮಾಡಿ, ಆ ಬದಿಯಲ್ಲಿ ಹೋಗುವ ಬಾಡಿಗೆಯ ಗಾಡಿಯನ್ನು ಕರೆದರು. ಗಾಡಿ ಬಂದು ಹತ್ತಿರ ನಿಂತಿತು.

ಆ ಮುದುಕನು ತನ್ನ ತಂದೆ ಅಲ್ಲವೆಂದು ಹೇಳಲು ಗೋಪತಿ ದಾಕ್ಷಿಣ್ಯಪಟ್ಟು, ಏನು ಮಾಡಲೆಂದು ಹೆಂಡತಿಯ ಮುಖನೋಡಿ ಆಲೋಚನೆ ಮಾಡುತ್ತಿರಲು, ಗಾಡಿಯವನು ಮುದುಕನನ್ನು ಗಾಡಿಯೊಳಗೆ ಏರಿಸಿ, "ಹಾಗೇನು ನೋಡುವಿರಿ? ಹತ್ತಿಕೊಳ್ಳಿ ಬೇಗ. ಎಲ್ಲಿಗೆ ಹೋಗಬೇಕೆಂದು ಹೇಳಿರಿ" ಎಂದು ಆ ಗಂಡಹೆಂಡಿರನ್ನು ಅವಸರಪಡಿಸಿದನು, ಮತ್ತೇನೂ ಮಾತಾಡದೆ ಆ ಗಂಡಹೆಂಡಿರು ಗಾಡಿಯನ್ನೇರಿ ಕುಳಿತರು. ಅವರು ಮನೆಗೆ ಮುಟ್ಟುವಷ್ಟರಲ್ಲಿ ಮುದುಕನ ಶರೀರವು ಜ್ವರದಿಂದ ಬಿಸಿಬಿಸಿಯಾಗಿತ್ತು. ಏನು ಕೇಳಿದರೂ ಅವನ ಬಾಯಿಯಿಂದ "ಹು ಹು ಹು" ಹೊರತು ಬೇರೆ ಮಾತೇ ಹೊರಡಲಿಲ್ಲ. ಗಾಡಿಯವನು ಮುದುಕನನ್ನು ಎತ್ತಿ ಜಗುಲಿಯಲ್ಲಿ ಮಲಗಿಸಿ ತನ್ನ ಬಾಡಿಗೆ ತೆಗೆದುಕೊಂಡು ಹೋದನು.

ಸುನಂದಳು ಮುದಕನಿಗೆ ಮಲಗಲು ಹಾಸಿಗೆ ಸಿದ್ಧಪಡಿಸಿದಳು. ಗೋಪತಿ ಆ ಮುದುಕನ ಗತಿ ಏನಾಗುವುದೋ ಎಂದು ಹೆದರಿ, ಬೇಗನೇ ಹೋಗಿ ವೈದ್ಯನನ್ನು ಕರೆದುಕೊಂಡು ಬಂದನು.

ನಾಲ್ಕು ದಿನಗಳ ಮೇಲೆ ಗೋಪತಿಗೆ ನೂರು ರೂಪಾಯಿ ಖರ್ಚು. ಆದನಂತರ ಮುದುಕ ಪೂರ್ತಿ ಗುಣಮುಖನಾದನು. ಆದರೆ ಅವನು ಆ ಗಂಡಹೆಂಡಿರೊಂದಿಗೆ, ತಾನು ಹೊರಟು ಹೋಗುತ್ತೇನೆಂಬ ಪ್ರಸಕ್ತಿ ಎತ್ತಲೇ ಇಲ್ಲ. ಅವನನ್ನು ಹೋಗೆಂದು ಹೇಳಲು ಆ ದಾಕ್ಷಿಣ್ಯದ ದಂಪತಿಗಳಿಂದ ಸಾಧ್ಯವಾಗಲೂ ಇಲ್ಲ.

ಮತ್ತೆ ನಾಲ್ಕು ದಿನಗಳು ಕಳೆದುವು. ಗೋಪತಿ ಹೆಂಡತಿಯೊಂದಿಗೆ, "ಈ ಮುದುಕ ಯಾವಾಗ ಹೋಗುತ್ತಾನೋ ಏನೋ?" ಎಂದನು.

"ಅವನನ್ನೇ ಕೇಳಿನೋಡಿದರೆ ಒಳ್ಳೇದಲ್ಲವೆ?" ಎಂದಳು ಸುನಂದ.

"ನಾಳೆ ಊಟವಾದ ಮೇಲೆ ನೀನೇ ಕೇಳಿಬಿಡು" ಎಂದನು ಗೋಪತಿ.

ಹಾಗೆ ಕೇಳಲು ತನ್ನಿಂದಾಗದೆಂದು ಗಂಡನೊಂದಿಗೆ ಹೇಳಲು ಸುನಂದಳಿಗೆ ಸಂಕೋಚ ಅಡ್ಡ ಬಂದಿತು. ಅವರೇ ಕೇಳಿಯಾರು ಎಂದುಕೊಂಡು ಸುಮ್ಮನಿದ್ದಳು.

ಹೀಗೆಯೇ ಮತ್ತೆರಡು ದಿನಗಳು ಕಳೆದ ಮೇಲೆ ಮುದುಕನನ್ನು ತಮ್ಮ ಬಾಯಿಯಿಂದ ಹೋಗೆನ್ನಲು ತಮ್ಮಿಬ್ಬರಿಂದ ಸಾಧ್ಯವಾಗದೆಂದು ಖಂಡಿತ ಮಾಡಿಕೊಂಡರು. ಬೇರೆ ಏನು ಉಪಾಯವೆಂದು ತಲೆ ಕೆರೆದು ಬಹಳವಾಗಿ ಯೋಚಿಸಿ ಒಂದು ಉಪಾಯ ನಿರ್ಧರಿಸಿದರು.

ಗೋಪತಿ ಗಟ್ಟಿ ಆಲೋಚನೆ ಮಾಡಿ, ಮುದುಕನೊಂದಿಗೆ, "ನಾಳೆ ಬೆಳಗ್ಗೆ ನಾನೂ, ಸುನಂದಳೂ ನಿಮ್ಮನ್ನು ಬಿಟ್ಟು ಅವಳ ತೌರಿನ ವರೆಗೆ ಹೋಗಬೇಕಾಗಿದೆ. ಅಲ್ಲಿ ಒಂದು ಮದುವೆಗೆ ಹೋಗಬೇಕು. ಹಿಂದಿರುಗಿ ಬರಲು ಎರಡು ದಿನಗಳಾಗುತ್ತೆ" ಎಂದನು.



"ಸಂತೋಷವಾಗಿ ಹೋಗಿ ಬನ್ನಿರಪ್ಪ. ಆ ಎರಡು ದಿನಗಳ ವರೆಗೆ ನನ್ನ ಊಟ ತಿಂಡಿಗಳಿಗೆ ನೀವೇನೂ ಸಂಕೋಚಪಡಬೇಡಿ. ಹೇಗೋ ನಾನು ನೋಡಿಕೊಳ್ಳುತ್ತೇನೆ. ನೀವು ಬರುವಾಗ ಒಂದು ದಿನ ತಡವಾದರೂ ಚಿಂತೆ ಇಲ್ಲ" ಎಂದನು ಮುದುಕ ಸರ್ವ ಸಾಧಾರಣವಾಗಿ.

ಮುದುಕನು ಹೇಳಿದುದನ್ನು ಕೇಳಿ ಗೋಪತಿ ಗಾಬರಿ ಬಿದ್ದನು. ಏನು ಮಾಡಲಿಕ್ಕೂ ದಾರಿ ಕಾಣದೆ ಹೆಂಡತಿಯನ್ನು ಕರೆದುಕೊಂಡು ಪಟ್ಟಣದ ಒಂದು ಮೂಲೆಯಲ್ಲಿರುವ ಛತ್ರದಲ್ಲಿ ಎರಡು ದಿನಗಳವರೆಗೆ ಗುಟ್ಟಾಗಿದ್ದು, ತಿರುಗಿ ಮನೆಗೆ ಬಂದು ಸೇರಿದನು. ಈ ಸುಳ್ಳಿನ ಉಪಾಯದಿಂದ ಸ್ವಲ್ಪ ಹಣ ವ್ಯರ್ಥವಾದುದೇ ಲಾಭ. ಈ ಮುದುಕನಿಂದ ಹೇಗೆ ಬಿಡುಗಡೆಯಾಗುತ್ತದೋ ? ಎಷ್ಟು ಆಲೋಚನೆ ಮಾಡಿದರೂ ಆ ಗಂಡ ಹೆಂಡಿರಿಗೆ ಗೊತ್ತಾಗಲಿಲ್ಲ. ಇಬ್ಬರೂ ಹತಾಶರಾಗಿ ಮುಖ ಒಣಗಿಸಿಕೊಂಡರು.

ಒಂದು ದಿನ ರಾತ್ರಿ ಅವರು ಆ ಮುದುಕನನ್ನು ಕುರಿತು ಮಾತಾಡಿಕೊಂಡಿರುವಾಗ, ಮುಂದಿನ ಕೋಣೆಯಲ್ಲಿ ಮಲಗಿದ್ದ ಮುದುಕನು ಎದ್ದು ಅವರ ಹತ್ತಿರ ಬಂದು, "ನೋಡಿರಪ್ಪಾ, ಯಾವಾಗಲೂ ನನ್ನನ್ನು ಕುರಿತೇ ಇಲ್ಲದ್ದು ಹೊಲ್ಲದ್ದು ಹೇಳಿಕೊಂಡು ನಿಮ್ಮ ನಿದ್ರೇನೂ ಕೆಡಿಸಿ, ನನ್ನ ನಿದ್ರೇನೂ ಹಾಳು ಮಾಡಿ ಹಾಕಬೇಡಿ. ನಾನು ಈ ಮನೆ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಆ ದಿನ ರಾತ್ರಿ ನೀವು ನನ್ನನ್ನು ಮನೆಗೆ ಕರೆದುಕೊಂಡು ಬಾರದಿದ್ದಿದ್ದರೆ, ನಾನು ಹಾಯಾಗಿ ಯಾರಮನೇ ಜಗಲೀ ಮೇಲೋ ಸತ್ತು ಹೋಗಿ ಬಿಡುತ್ತಿದ್ದೆ. ನೀವು ನನ್ನನ್ನು ಬದುಕಿಸಿದ್ದಕ್ಕೆ ಪೋಷಿಸುವ ಭಾರವೂ ನಿಮ್ಮದೇ. ಸಾಧ್ಯವಿಲ್ಲದಿದ್ದರೆ ಹೇಳಿಬಿಡಿರಿ. ಈಗಲೇ ಹೋಗಿ ನಿಮ್ಮ ಮನೇ ಹಿಂದಿರುವ ಬಾವಿಗೆ ಹಾರಿಬಿಡುತ್ತೇನೆ!" ಎಂದು ಹೇಳಿ, ಹೋಗಿ ತನ್ನ ಜಾಗದಲ್ಲಿ ಮಲಗಿಕೊಂಡನು.

ಮುದುಕನು ಬದುಕಿರುವ ವರೆಗೂ ಅವನನ್ನು ಪೋಷಿಸುವ ಬಾಧ್ಯತೆ ತಮಗೆ ತಪ್ಪದೆಂದು ಆ ಗಂಡ ಹೆಂಡಿರಿಗೆ ಗೊತ್ತಾಯಿತು.



ಸುನಂದಳ ಮದುವೆಗೆ ಬಂದಿರಲಿಲ್ಲ. ಈಗ ಅವಳು ಸ್ನೇಹಿತೆಯ ಹೊಸ ಸಂಸಾರ ಹೇಗಿದೆಯೋ ನೋಡೋಣವೆಂದುಕೊಂಡು, ಹುಡುಕುತ್ತಾ ಹೀಗೆ ಬಂದಿದ್ದಳು.

ನಂದಿನಿಯನ್ನು ನೋಡಿ ಸುನಂದಳಿಗೆ ಬಹಳ ಸಂತೋಷವಾಯಿತು. ಅವರಿಬ್ಬರೂ ಆ ಮಾತು ಈ ಮಾತು ಆಡುತ್ತಾ, ಹೊತ್ತು ಕಳೆಯುತೊಡಗಿದರು. ಸ್ವಲ್ಪ ಹೊತ್ತಿನ ಮೇಲೆ ಮುದುಕನು ಅವರ ಹತ್ತಿರ ಬಂದು ಸುನಂದಳನ್ನು ನೋಡಿ, "ಈ ಹಾಳುಹರಟೆಗೊಂದು ಅಂತ್ಯವೇ ಇಲ್ಲವೇನು ? ನಾನೊಬ್ಬ ಇದ್ದೇನೆಂದೂ ತಿಳಿಯದೆ ? ನನಗಿಷ್ಟು ಬಡಿಸುವಿಯಾ ? ಹೀಗೇ ಸಾಯಿಸುವಿಯಾ ?" ಎಂದನು ರುಷ್ಟನಾಗಿ.

ಸುನಂದ ಮತ್ತೇನೂ ಮಾತಾಡದೆ, ಎದ್ದು ಹೋಗಿ ಮುದುಕನಿಗೆ ಊಟ ಬಡಿಸಿದಳು. ಅವನು ಬಡಿಸಿದ್ದನ್ನು ತಿನ್ನಲು ಪ್ರಾರಂಭಿಸಿ, "ಈ ಸೋರೆಕಾಯಿ ಅಂದರೆ ನನಗೆ ಆಗದೆಂದು ಸಾವಿರಸಾರಿ ಹೇಳಿದ್ದೇನೆ. ಆದರೂ ಅದನ್ನೇ ಮಾಡಿ ನನ್ನ ಮುಂದೆ ಬಡೀತೀ ! ವಾಕರಿಕೆ ಬರುತ್ತೆ !" ಎಂದು ರುಸರುಸಲಾಡಿ ಹೇಗೋ ಉಂಡು ಮುಗಿಸಿ ಬಂದು ಮತ್ತೆ ಬಿದ್ದುಕೊಂಡನು.

ಇದನ್ನೆಲ್ಲ ನೋಡಿ ನಂದಿನಿ ಸುನಂದಳೊಂದಿಗೆ, "ನೋಡಿದರೆ ನಿನ್ನ ಮಾವಯ್ಯ ತುಂಬಾ ಸಿಡುಕಿನವರ ಹಾಗೆ ಕಾಣುತ್ತದೆ. ನಿನ್ನವರಿಗೆ ಕೂಡಾ ಈ ಲಕ್ಷಣ ಇಲ್ಲವೆಂದು ನಂಬಬಹುದೇ ?" ಎಂದಳು.

"ಆ ಮುದುಕ ನನ್ನ ಮಾವಯ್ಯನೂ ಅಲ್ಲ. ಏನೂ ಅಲ್ಲ. ಯಾವನೋ ಏನೋ ! ದಾರಿಯಲ್ಲಿ ಹೋಗುವವನನ್ನು ತಂದು ನಮ್ಮ ತಲೇ ಮೇಲೆ ಏರಿಸಿಕೊಂಡಿದ್ದೇವೆ" ಎಂದು ಸುನಂದಳು ನಡೆದ ಸಂಗತಿಯನ್ನೆಲ್ಲಾ ನಂದಿನಿಯೊಂದಿಗೆ ವಿವರಿಸಿ ಹೇಳಿದಳು.

"ಸಂಬಳದ ಹಣದಲ್ಲಿ ತಿಂಗಳಿಗೆ ಉಳಿಸುವ ನೂರು ರೂಪಾಯಿ ಇವನಿಗಾಗಿ ಖರ್ಚುಮಾಡಬೇಕಾಯಿತು. ಒಂದು ವೇಳೆ ನನ್ನ ಅಪ್ಪ ಬದುಕಿದ್ದಿದ್ದರೆ ಈ ಖರ್ಚು ಹೇಗೂ ಮಾಡಲೇ ಬೇಕಷ್ಟೆ ?" ಎಂದನು ಗೋಪತಿ.

"ಇಬ್ಬರಿಗೂ ಹೇಗೂ ಅಡಿಗೆ ಮಾಡಲೇ ಬೇಕಷ್ಟೆ ? ಮೇಲೆ ಒಂದು ಮುಷ್ಟಿ ಅಕ್ಕಿ ಹೆಚ್ಚು. ಮತ್ತೆರಡು ತರಕಾರಿ, ಪಲ್ಯೆ ಅಷ್ಟೇ ತಾನೇ ? ಅಡಿಗೇ ಮಾಡುವುದು ಕಷ್ಟವೇನೂ ಇಲ್ಲ. ಎರಡರೊಂದಿಗೆ ಇನ್ನೊಂದೂ ಬೇಯುತ್ತೆ. ಬೇಯಿಸಿದರಾಯಿತು" ಎಂದಳು ಸುನಂದ.

ಆ ದಿನ ಗೋಪತಿ ಕಚೇರಿಗೆ ಹೊರಟು ಹೋಗಿ ಸ್ವಲ್ಪ ಹೊತ್ತಿನಲ್ಲಿ, ಇದಿರುನೋಡದಂತೆ ಸುನಂದಳ ಸ್ನೇಹಿತೆಯೊಬ್ಬಳು ಬಂದಳು. ನಂದಿನಿ ಎಂದು ಅವಳ ಹೆಸರು. ಸುನಂದಳ ಮದುವೆಯ ದಿನವೇ, ಅವಳ ಅಣ್ಣನಿಗೂ ಮದುವೆಯಾದುದರಿಂದ ಅವಳು

ನಂದಿನಿ ಆಶ್ಚರ್ಯಪಟ್ಟು "ಹಾಗೇನು ಕತೆ! ನಿಮ್ಮ ದಾಕ್ಷಿಣ್ಯದ ಗುಣ ಇಲ್ಲೀವರೆಗೆ ಬಂತೂ ಅನ್ನು!" ಎಂದಳು.

"ಏನು ಮಾಡಲಿ ಹೇಳು. ಗಟ್ಟಿಯಾಗಿ ಹೋಗೆಂದು ಬಿಟ್ಟರೆ ನಮ್ಮ ಬಾವಿಗೇ ಹಾರಿ ಸಾಯುತ್ತೇನೆನ್ನುತ್ತಾನೆ. ಹಾಗೇನಾದರೂ ಆಗಿ ಬಿಟ್ಟರೆ ಹತ್ತು ಮಂದೀ ಮುಂದೆ ನಮ್ಮ ಮರ್ಯಾದೆ ಉಳಿದೀತೆ? ನಮ್ಮನ್ನು ಕೋತ್ವಾಲ ಕಚೇರಿಗೆ ಎಳೆದುಕೊಂಡು ಹೋದರೆ ಮತ್ತೇನಿದೆ ಹೇಳು" ಎಂದಳು ಸುನಂದ.

"ಅದು ನಿಮ್ಮ ಭ್ರಮೆ. ಹೀಗೆ ಸಾಯುತ್ತೇನೆಂದು ಬೆದರಿಸುವವರಿಗೆ ಸಾಯುವುದೆಂದರೆ ಕೆಟ್ಟ ಭಯ. ನಾನು ನಿಮಿಷ ಮಾತ್ರದಲ್ಲಿ ಈ ಮುದುಕನನ್ನು ಓಡಿಸುತ್ತೇನೆ ನೋಡು. ನೀನು ಮಾತ್ರ ನಾನು ಹೇಳುವುದಕ್ಕೆ ಸರಿಸರಿ ಅನ್ನಬೇಕು. ಅಷ್ಟೇ ಸಾಕು. ಮತ್ತೇನೂ ಮಾಡಬೇಕಾಗಿಲ್ಲ" ಎಂದಳು ನಂದಿನಿ. ತರುವಾಯ ನಂದಿನಿ ಸ್ವಲ್ಪ ಸಕ್ಕರೆಯನ್ನು ಚೆನ್ನಾಗಿ ಪುಡಿ ಮಾಡಿದಳು. ಅದನ್ನು ಪೊಟ್ಟಣ ಕಟ್ಟಿ ತನ್ನ ಹತ್ತಿರ ಇಟ್ಟುಕೊಂಡಳು. ಮಧ್ಯಾಹ್ನದ ಬಿಸಿಲು ತಗ್ಗಿ, ತಣ್ಣಗಿನ ಗಾಳಿ ಬೀಸಲು ಪ್ರಾರಂಭವಾದಾಗ ಮುದುಕನು ನಿದ್ದೆಯಿಂದೆದ್ದು, ಫಳಾರ ಏನಿದೆಯೋ ನೋಡಲು ಅಡಿಗೇ ಕೋಣೆಯ ಕಡೆಗೆ ನಡೆದನು. ಆಗ ಅಡಿಗೇ ಕೋಣೆಯಲ್ಲಿ ಸುನಂದಳೊಂದಿಗಿದ್ದ ನಂದಿನಿ, ಮುದುಕನನ್ನು ನೋಡದವಳಂತೆ ಮೆಲ್ಲನೆಯಿಂದ, "ಇಕೋ ಸುನಂದಾ, ಸಾಯುವ ಮುದುಕನನ್ನು ಬದುಕಿಸಿದ್ದರಿಂದ ಅವನನ್ನು ಪೋಷಿಸುವ ಭಾರ ನಿಮ್ಮದೇ. ಆದರೆ ಆ ಶಕ್ತಿ ನಿಮಗಿಲ್ಲಾ ಅನ್ನುವಿ. ಹಾಗಿರುವಾಗ ಅವನು ನೋವಿಲ್ಲದೆ ಸುಖವಾಗಿ ಸಾಯುವ ಹಾಗೆ ಮಾಡೋದೇ ಒಳ್ಳೇದು. ಆಮೇಲೆ ಹೆಣ ಎತ್ತುವ ಖರ್ಚು ಮಾತ್ರ ಮಾಡಿದರಾಯಿತು" ಎಂದಳು.

"ಹೌದು ಹೌದು" ಎಂದಳು ಸುನಂದ.

"ಒಪ್ಪುವಿಯಷ್ಟೆ? ನನ್ನ ಹತ್ತಿರ ಬಂದು ಬಗೆಯ ವಿಷವಿದೆ. ಇದು ಒಂದು ಚಿಟಿಕೆ ಅವನ ಹೊಟ್ಟೆಗೆ



ಹೋದರೆ ಸಾಕು. ಯಾವ ಫಳಾರದಲ್ಲಾದರೂ ಬೆರೆಸಿ ಬಿಡು. ರುಚಿ ವ್ಯತ್ಯಾಸ ಗೊತ್ತಾಗದು. ಏಳು ದಿನಗಳೊಳಗೆ ಅವನು ಮಾಡಿದ ಪಾಪ ಪುಣ್ಯಗಳಿಗೆ ತಕ್ಕಹಾಗೆ ನರಕಕ್ಕೋ ಸ್ವರ್ಗಕ್ಕೋ ಹೋಗಿ ಸೇರಿ ಬಿಡುತ್ತಾನೆ. ವಿಷ ಪ್ರಯೋಗವಾಯಿತೆಂದು ಕಡೆಗೆ ಧನ್ವಂತರಿಯಂಥ ವೈದ್ಯನೇ ಪರೀಕ್ಷಿಸಿದರೂ ಗೊತ್ತಾಗಲಾರದು, ಮುದುಕನಿಗೆ ಕೂಡಾ ಯಾವ ಸಂಕಟವೂ ಆಗದು. ತಣ್ಣಗೆ ಕಣ್ಣು ಮುಚ್ಚುತ್ತಾನೆ" ಎಂದು ನಂದಿನಿ ತನ್ನ ಹತ್ತಿರವಿದ್ದ ಸಕ್ಕರೆ ಪೊಟ್ಟಣವನ್ನು ಸುನಂದಳಿಗೆ ಕೊಟ್ಟಳು.

ಪಕ್ಕದ ಗೋಡೆಯಾಚೆ ನಿಂತು ಆ ಮಾತುಗಳನ್ನು ಕೇಳಿದ ಮುದುಕನಿಗೆ ಭೀತಿಯಿಂದ ತಲೆ ತಿರುಗಿತು. ಅವನು ಹಿಂದಿರುಗಿ ತನ್ನ ಬಟ್ಟೆ ಬರೆಗಳನ್ನು ಬಾಚಿ ಸುತ್ತಿಕಟ್ಟಿಕೊಂಡು "ಸುನಂದಮ್ಮಾ, ನಾನು ಫಕ್ಕನೆ ಹೊರಟು ಹೋಗುವುದಕ್ಕೆ ನೊಂದು ಕೊಳ್ಳಬೇಡ. ಈ ವಯಸ್ಸಿನಲ್ಲಿ ಹೀಗೆ ಬಿದ್ದಿರುವುದಕ್ಕಿಂತ ತೀರ್ಥಯಾತ್ರೆ ಮಾಡುವುದು ಒಳ್ಳೆಯದೆಂದು ನಿದ್ದೆಯಲ್ಲಿ ದೇವತೆಯೊಬ್ಬಳು ನನ್ನನ್ನು ತಿವಿದು ಹೇಳಿದಳು. ಒಳ್ಳೆಯ ಯೋಚನೆ ಬಂದ ಕೂಡಲೇ ಮಾಡಿಬಿಡಬೇಕು. ಈಗಲೇ ಹೊರಟೆ. ನನ್ನ ಬಟ್ಟೆಗಳನ್ನು ಮಾತ್ರ ಎತ್ತಿಕೊಂಡಿದ್ದೇನಮ್ಮಾ" ಎಂದನು. "ಫಕ್ಕನೆ ಹೋಗುವುದೇ ? ಅವರ ಹತ್ತಿರ ಹೇಳಿ ಹೋಗಬಹುದಲ್ಲಾ. ಫಳಾರ ಕೊಡುತ್ತೇನೆ..." ಎಂದು ಸುನಂದ ಹೇಳುತ್ತಲೇ, ಮುದುಕನಿಗೆ ಮೈಪೂರಾ ಕಂಪಿಸಿತು.

"ಬೇಡಮ್ಮಾ, ಮಧ್ಯಾಹ್ನ ಉಂಡದ್ದೇ ಇನ್ನೂ ಕರಗಿಲ್ಲ. ನಿನ್ನ ಗಂಡನೊಂದಿಗೆ ನೀನೇ ಹೇಳಿ ಬಿಡಮ್ಮಾ" ಎಂದು ಹೇಳುತ್ತಾ ಬೀದಿಗಿಳಿದು ಹೋಗಿಬಿಟ್ಟನು ಮುದುಕ.

ಸಾಯಂಕಾಲವಾದ ಮೇಲೆ ಕಚೇರಿಯಿಂದ ಮನೆಗೆ ಬಂದ ಗೋಪತಿ, ಸುನಂದ ಹೇಳಿದುದನ್ನೆಲ್ಲಾ ಕೇಳಿದನು. "ಗೆಳತಿ ನಂದಿನಿಯ ಪುಣ್ಯದಿಂದ ಪೀಡೆ ಪರಿಹಾರವಾಯಿತು" ಎಂದಳು ಕಡೆಗೆ ಸುನಂದ.

ಗೋಪತಿ ನಂದಿನಿಯನ್ನು ನೋಡಿ ಏನೋ ಹೇಳಲಿರಲು, ನಂದಿನಿಯೇ ಹೀಗೆಂದಳು: "ಮೊದಲು ನೀವಿಬ್ಬರೂ ನಿಮ್ಮ ಅತಿ ದಾಕ್ಷಿಣ್ಯದ ಪೀಡೆಯನ್ನು ಓಡಿಸಬೇಕು. ಸ್ವಲ್ಪಮಟ್ಟಿಗೆ ಪರೋಪಕಾರ ಬುದ್ಧಿ ಇಲ್ಲದವರು ಮನುಷ್ಯರಲ್ಲ ನಿಜ. ಹದ್ದು ಮೀರಿದ ಪರೋಪಕಾರವು ಬಹಳ ಕೆಟ್ಟದು."

"ಈ ಸಂಗತಿ ನಾವೀಗ ಅನುಭವಪೂರ್ವಕವಾಗಿ ತಿಳಿದುಕೊಂಡೆವಲ್ಲ?" ಎಂದು ಗೋಪತಿ ಹೆಂಡತಿಯ ಮುಖ ನೋಡಿದನು. ಸುನಂದ ನಂದಿನಿಯನ್ನು ನೋಡಿ ಮುಗುಳು ನಗುತ್ತ ತಲೆಯಾಡಿಸಿದಳು.





# ದುರಾಚಾರ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದು ಸಾರಿ ಬೋಧಿಸತ್ವನು ಬ್ರಹ್ಮದತ್ತ ರಾಜನ ಕುಮಾರನಾಗಿಯೇ ಜನ್ಮವೆತ್ತಿದನು. ಅವನಿಗೆ ಬ್ರಹ್ಮದತ್ತ ಕುಮಾರನೆಂದೇ ನಾಮಕರಣವಾಯಿತು. ಆ ಕುಮಾರನು ಬಾಲ್ಯವು ಕಳೆಯುತ್ತಲೇ ತಕ್ಷಶಿಲೆಗೆ ಹೋಗಿ ವಿದ್ಯೆಗಳನ್ನು ಕಲಿಯುತ್ತ, ಹದಿನಾರು ವರ್ಷ ವಯಸ್ಸು ತುಂಬುವುದರೊಳಗೇ ವೇದಗಳನ್ನೂ, ವೇದಾಂಗಗಳನ್ನೂ ಉಪನಿಷತ್ತುಗಳನ್ನೂ ಓದಿ ಮುಗಿಸಿದನು.

ಅಲ್ಲಿಯ ವಿದ್ಯಾಭ್ಯಾಸಗಳನ್ನು ಮುಗಿಸಿ ಬಂದ ಕೂಡಲೇ ತಂದೆ ಅವನಿಗೆ ಯುವರಾಜ ಪಟ್ಟಾಭಿಷೇಕವನ್ನೂ ಮಾಡಿದನು.

ಆ ಕಾಲದಲ್ಲಿ ಕಾಶೀ ರಾಜ್ಯದಲ್ಲಿ ಪ್ರಜೆಗಳು ಅನೇಕ ದೇವತೆಗಳನ್ನು ಪೂಜಿಸಿಕೊಂಡಿದ್ದರು. ಅನೇಕ ಬಗೆಯ ಉತ್ಸವಗಳೂ, ಜಾತ್ರೆಗಳೂ ನಡೆಯುತ್ತಿದ್ದುವು, ಜಾತ್ರೆ ನಡೆಯುವಾಗ ಕುರಿಗಳನ್ನೂ, ಮೇಕೆಗಳನ್ನೂ ಕೋಳಿಗಳನ್ನೂ ಕೊಂದು ಬಲಿಕೊಟ್ಟು, ರಕ್ತವನ್ನು ನೈವೇದ್ಯ ಮಾಡುತ್ತಿದ್ದರು. ಬ್ರಹ್ಮದತ್ತ ಕುಮಾರನು ಪ್ರಜೆಗಳ ಮೂಢ ವಿಶ್ವಾಸಗಳನ್ನೂ, ಹಿಂಸೆಗಳನ್ನೂ ನೋಡಿ ತುಂಬಾ ಸಂಕಟ ಪಡುತ್ತಿದ್ದನು. "ನಾನು ರಾಜನಾಗಿ ಬಂದ ಮೇಲೆ ಈ ದುರಾಚಾರಗಳೆಲ್ಲವನ್ನೂ, ಒಂದು ಬೊಟ್ಟು ರಕ್ತವೂ ಸುರಿಯದಂತೆ ನಿಲ್ಲಿಸಿ ಬಿಡುತ್ತೇನೆ" ಎಂದು ತನ್ನೊಳಗೇ ಅವನು ಅಂದುಕೊಂಡನು.

ಕಾಶೀ ನಗರದ ಹೊರಗೆ ಒಂದು ಆಲದ ಮರವಿದ್ದಿತು. ಆ ಮರದಲ್ಲಿ ಒಬ್ಬಳು ದೇವತೆ ಇರುವಳೆಂದೂ, ಹರಕೆ ಹೇಳಿ ಪೂಜಿಸುವವರಿಗೆ ಆ ದೇವತೆ ಮಕ್ಕಳನ್ನು ಕೊಡುವಳೆಂದೂ, ಇತರ ಕೋರಿಕೆಗಳನ್ನು ಕೂಡಾ ತೀರಿಸುವಳೆಂದೂ ಪ್ರಜೆಗಳಲ್ಲಿ ಗಟ್ಟಿಯಾದ ನಂಬುಗೆಯಿದ್ದಿತು.

ಒಂದು ದಿನ ಬ್ರಹ್ಮದತ್ತ ಕುಮಾರನು ರಥದ ಮೇಲೇರಿಕೊಂಡು ಊರ ಹೊರಗಿನ ಆಲದ ಮರದ ಹತ್ತಿರ ಹೋದನು. ಆ ಮರವನ್ನು ಸುತ್ತಿಕೊಂಡು ಅನೇಕ ಮಂದಿ ಸ್ತ್ರೀಯರೂ ಪುರುಷರೂ ಭಕ್ತಿಯಿಂದ ವೃಕ್ಷ ಪ್ರದಕ್ಷಿಣೆ ಮಾಡಿಕೊಂಡಿದ್ದರು. ಮರದಿಂದ ಅಷ್ಟು ದೂರದಲ್ಲಿ ಯುವರಾಜನು ರಥದಿಂದಿಳಿದು, ಹೂಗಳಿಂದ ವೃಕ್ಷವನ್ನು ಪೂಜಿಸಿ, ಮೂರು ಪ್ರದಕ್ಷಿಣೆಗಳನ್ನೂ ಮಾಡಿದನು. ಆಮೇಲೆ

ಅವನು ತನ್ನ ರಥವನ್ನೇರಿ, ಹಿಂದಿರುಗಿ ಊರೊಳಗೆ ಹೊರಟು ಹೋದನು. ಅನಂತರ ಅವನು ಆಗಾಗ ಆ ಆಲದ ಮರದ ಹತ್ತಿರ ಬಂದು, ಕ್ಷುದ್ರದೇವತೆಯ ಮೇಲೆ ವಿಶ್ವಾಸವಿರುವ ಸಾಧಾರಣ ಮನುಷ್ಯರ ಹಾಗೆಯೇ ಆಲದ ಮರವನ್ನು ಪೂಜಿಸಿ, ಪ್ರದಕ್ಷಿಣೆ ಬರುತ್ತಾ ಇದ್ದನು.

ಕಾಲಕ್ರಮದಲ್ಲಿ ವೃದ್ಧ ರಾಜನು ತೀರಿಹೋದನು. ಆಮೇಲೆ ಬ್ರಹ್ಮದತ್ತ ಕುಮಾರನು ಕಾಶೀ ರಾಜ್ಯಕ್ಕೆ ರಾಜನೂ ಆದನು.

ರಾಜ್ಯಾಭಿಷೇಕವೆಲ್ಲ ಮುಗಿದ ಮೇಲೆ, ದೊಡ್ಡದೊಂದು ಮಹಾಸಭೆಯನ್ನು ಸೇರಿಸಿ ಬ್ರಹ್ಮದತ್ತ ಕುಮಾರನು ಈ ರೀತಿಯಾಗಿ ಹೇಳಿದನು :

"ನಾನು ಹೇಗೆ ಈ ದೇಶಕ್ಕೆ ರಾಜನಾದೆನೆಂಬುದು ನಿಮಗಾರಿಗೂ ತಿಳಿಯದು. ನಾನು ಯುವರಾಜನಾಗಿದ್ದ ಕಾಲದಲ್ಲಿ ಊರ ಹೊರಗಿನ ಆಲದ ಮರದ ದೇವತೆಯನ್ನು ಪೂಜಿಸಿ ಪ್ರದಕ್ಷಿಣೆ ಮಾಡಿ ಬರುತ್ತಾ ಇದ್ದ ಸಂಗತಿ ನಿಮಗೆ ಗೊತ್ತಿರಬಹುದು. ಆ ದೇವತೆ ನನ್ನನ್ನು ರಾಜನಾಗುವಂತೆ ಮಾಡಿದರೆ ಸಾವಿರ ಜೀವಿಗಳನ್ನು ಬಲಿಕೊಡುತ್ತೇನೆಂದು ಹರಿಕೆ ಹೇಳಿಕೊಂಡೆನು. ಈಗ ನನ್ನ ಕೋರಿಕೆ ನೆರವೇರಿಬಿಟ್ಟಿತು. ಹೇಳಿದ ಮಾತಿನ ಪ್ರಕಾರ ಆಲದ ಮರದ ದೇವತೆಗೆ ಬಲಿ ಕೊಡಬೇಕಾಗಿದೆ."

ಈ ಸಂಗತಿಯನ್ನು ಕೇಳಿದ ಕೂಡಲೇ ಸಭಿಕರೆಲ್ಲಾ ಅತ್ಯಾನಂದವನ್ನು ವ್ಯಕ್ತಪಡಿಸಿದರು. ಮಂತ್ರಿಗಳು, "ಮಹಾರಾಜಾ, ತಾವು ವೃಕ್ಷದೇವತೆಗೆ ಯಾವ ಜೀವಿಗಳನ್ನು ಬಲಿ ಕೊಡುವೆನೆಂದಿರೋ ಅಪ್ಪಣೆ ಕೊಡಿರಿ, ಎಲ್ಲಾ ಏರ್ಪಾಟುಗಳನ್ನೂ ಮಾಡಿಸುತ್ತೇವೆ" ಎಂದರು.

"ನಾನು ಬಲಿಕೊಡುವೆನೆಂದುದು ಮೂಕಪ್ರಾಣಿಗಳನ್ನಲ್ಲ, ದೇವತೆಗಳಿಗೆ ಮೂಕಪ್ರಾಣಿಗಳನ್ನು ಬಲಿಕೊಡುವ ಮನುಷ್ಯ ಪ್ರಾಣಿಗಳನ್ನು, ಅಂತಹ ಸಾವಿರ ಮಾನವ ಜೀವಿಗಳನ್ನು ಕರೆದುಕೊಂಡು ಬನ್ನಿರಿ. ನನ್ನ ಹರಿಕೆ ಸಲ್ಲಿಸಿಬಿಡುತ್ತೇನೆ. ಈ ದಿನದಿಂದ ಯಾರು ಯಾರು ಎಲ್ಲೆಲ್ಲಿ ದೇವತೆಗಳಿಗೆ ಮೂಕ ಪ್ರಾಣಿಗಳನ್ನು ಬಲಿಕೊಡುತ್ತಾರೋ ಅಂಥ ಮಹಾ ಪುಣ್ಯಾತ್ಮರಾದ ಮಾನವರು ವೃಕ್ಷದೇವತೆಗೆ ಬಲಿಕೊಡಲ್ಪಡುತ್ತಾರೆಂದು ದೇಶದಲ್ಲೆಲ್ಲಾ ಡಂಗುರ ಸಾರಿಸಿರಿ" ಎಂದನು ರಾಜ.

ಸಭಿಕರು ನಿರ್ವಿಣ್ಣರಾಗಿ ಹೋದರು. ಅವರೆಲ್ಲ ಬಲಿಗಳಲ್ಲಿ ನಂಬಿಕೆಯುಳ್ಳವರೇ. ಆದುದರಿಂದ ಏನೂ ಮಾತಾಡಲಾಗದೆ ಹೋದರು. ದೇಶದಲ್ಲೆಲ್ಲಾ ಡಂಗುರ ಸಾರಿಸಲಾಯಿತು. ಅಂದಿನಿಂದ ಇಂದ್ರಜಾಲದ ಹಾಗೆ ಕಾಶೀ ರಾಜ್ಯದಲ್ಲೆಲ್ಲಿಯೂ ಪ್ರಾಣಿ ಬಲಿಗಳು ನಡೆಯಲೇ ಇಲ್ಲ.






## ನಮ್ಮ ನದಿಗಳು :

# ಗಂಗಾ—೧

ನಾರದಮುನಿ ಒಂದು ಸಾರಿ ಭೂಲೋಕದಿಂದ ದೇವಲೋಕದ ಕಡೆಗೆ ಹೊರಟನು. ತುಂಬಿದ ಹುಣ್ಣಿಮೆ ಚಂದ್ರನ ಬೆಳುದಿಂಗಳ ಕಾಂತಿಯಲ್ಲಿ ಹಿಮಾಲಯ ಪರ್ವತಗಳ ಮೇಲಿನಿಂದ ನಾರದನು ಆನಂದವಾಗಿ ವೀಣೆ ಮೀಟಿಕೊಂಡು ಹಾಡುತ್ತಾ ಸಾವಧಾನವಾಗಿ ನಡೆಯುತ್ತಿದ್ದನು.

ಒಂದು ಕಣಿವೆಯ ಸಮೀಪದಲ್ಲಿ ಅದ್ಭುತವಾದ ಅಂದ ಚೆಂದಗಳಿಂದ ಕೂಡಿದ ಕೆಲಮಂದಿ ಸ್ತ್ರೀ ಪುರುಷರು ನಾರದನಿಗೆ ಕಂಡು ಬಂದರು. " ಯಾರಾಗಿರಬಹುದು ? " ಎಂದು ತನ್ನೊಳಗೇ ಆಶ್ಚರ್ಯಪಡುತ್ತಾ, ನಾರದಮುನಿ ಅವರನ್ನು ಸಮೀಪಿಸಿದನು.





" ಯಾರು ನೀವು ? " ಎಂದು ಕೇಳುತ್ತ ನಾರದನು ಅವರ ಸಮೀಪ ಬಂದಾಗ, ಮತ್ತೊಂದು ವಿಷಯವನ್ನು ಕಂಡು ಹಿಡಿದನು. ಅಲ್ಲಿರುವವರಲ್ಲಿ ಪ್ರತಿಯೊಬ್ಬರಿಗೂ ಏನೋ ಒಂದು ಅವಯವದ ಲೋಪವಿದ್ದಿತು. ಒಬ್ಬನಿಗೆ ಒಂದು ಕಣ್ಣಾದರೆ, ಪಕ್ಕದಲ್ಲಿರುವವನಿಗೆ ಒಂದು ಕಿವಿ ಇರಲಿಲ್ಲ. ಇನ್ನೊಬ್ಬನಿಗೆ ಕೈ ಇಲ್ಲದಿದ್ದರೆ ಮತ್ತೊಬ್ಬನಿಗೆ ಕಾಲಿಲ್ಲ.







ನಾರದನ ಪ್ರಶ್ನೆಗೆ ಉತ್ತರ ಕೊಡಲು ಮೊದಲು ಶಂಕಿಸಿದರೂ ಆಮೇಲೆ ಅವರು ತಾವು ರಾಗಗಳ, ಸ್ವರಗಳ ಆತ್ಮಗಳಾದ ಗಂಧರ್ವರೆಂದು ತಿಳಿಯ ಪಡಿಸಿದರು. ಗಾಯಿನೀ ಗಾಯಕರು ರಾಗ ಗಳನ್ನು ರಾಗಯುಕ್ತವಾಗಿ ಆಲಾಪಿಸುವಾಗ, ಅದರ ದುಷ್ಫಲಿತಗಳು ತಮಗೆ ಪೆಟ್ಟುಗಳಾಗಿ ತಗಲುತ್ತವೆಂದೂ, ಆ ಕಾರಣದಿಂದ ಹೀಗೆ ಒಂದೊಂದು ಅವಯುವವು ಹೋಗುತ್ತದೆಂದೂ ಅವರು ಹೇಳಿದರು.

ಆ ವಿಷಯವು ಸಹಜವಾಗಿಯೇ ನಾರದನನ್ನು ಚಿಂತೆಗೀಡು ಮಾಡಿತು. ಅವರ ಹತ್ತಿರ ಇನ್ನೂ ವಿಚಾರಿಸಿದಾಗ, ಪರಿಪೂರ್ಣ ಗಾಯಕನಾದ ಪರಮಶಿವನು ಹಾಡಿದನಾದರೆ, ಆ ಹಾಡನ್ನು ಕೇಳುವುದರ ಮೂಲಕ ತಾವು ಕಳೆದುಕೊಂಡ ಅವಯವಗಳು ಮತ್ತೆ ಬರುತ್ತವೆಂದು ತಿಳಿಯ ಪಡಿಸಿದರು. ಒಡನೆಯೇ ನಾರದನು ಕೈಲಾಸಕ್ಕೆ ಹೋಗಿ, ಶಿವನೊಂದಿಗೆ ಆ ವಿಷಯವನ್ನು ವಿನಂತಿಸಿಕೊಂಡನು.





ಅದನ್ನು ಕೇಳಿ ಪರಮಶಿವನು ಹಾಡಲು ಒಪ್ಪಿ ಕೊಂಡನು. ತನ್ನ ಹಾಡನ್ನು ಕೇಳಲು ಕಡೇಪಕ್ಷ ಒಬ್ಬನಾದರೂ ಪರಿಪೂರ್ಣ ಶ್ರೋತೃಜ್ಞಾನಿ ಇದ್ದು ತೀರಬೇಕೆಂದು ಶಿವನು ಪಟ್ಟುಹಿಡಿದನು. ಬ್ರಹ್ಮ ವಿಷ್ಣುಗಳಿಬ್ಬರೇ ಪರಿಪೂರ್ಣ ಶ್ರೋತೃ ಜ್ಞಾನಿಗಳೆಂದೂ ಶಿವನು ಸೂಚಿಸಿದನು. ನಾರದನು ಬ್ರಹ್ಮನ ಬಳಿಗೆ ಹೋಗಿ ಸಂಗತಿ ತಿಳಿಸಿ ಶಿವನ ಹಾಡನ್ನು ಕೇಳಲು ಬರಬೇಕೆಂದು ಪ್ರಾರ್ಥಿಸಿದನು.

ಬ್ರಹ್ಮನು ಶಿವನ ಗಾಯನವನ್ನು ಕೇಳಲು ಪರಮ ಸಂತೋಷದಿಂದ ಒಪ್ಪಿದನು. ಯಾವುದಕ್ಕೂ ಒಳ್ಳೆಯದೆಂದುಕೊಂಡು ನಾರದನು ಪರಿಪೂರ್ಣ ಶ್ರೋತೃಜ್ಞಾನಿಗಳಿಬ್ಬರನ್ನು ಕರೆದೊಯ್ಯಬೇಕೆಂದುಕೊಂಡನು. ಅಂತಲೇ ವಿಷ್ಣುವಿನ ಬಳಿಗೆ ಹೋಗಿ ವಿಷಯವನ್ನು ಹೇಳುತ್ತಲೇ ವಿಷ್ಣು ಅತ್ಯಾನಂದದಿಂದ ಅಂಗೀಕರಿಸಿದನು.





ಬ್ರಹ್ಮ ವಿಷ್ಣುಗಳೂ, ಗಂಧರ್ವರೂ ಶಿವನ ಸಮಕ್ಷಮಕ್ಕೆ ಬಂದರು. ಶಿವನು ಬಹಳ ಹೊತ್ತು ಮೌನವಹಿಸಿ, ಧ್ಯಾನ ನಿಷ್ಠೆಯಲ್ಲಿದ್ದು ಆಮೇಲೆ ಮೆಲ್ಲನೆ ಹಾಡಲು ತೊಡಗಿದನು. ಅದ್ಭುತವಾದ ಆ ಗಾನದಿಂದ ಎಲ್ಲರೂ ಪರವಶರಾಗಿ ಹೋದರು.

ಶಿವನ ಗಾನಕ್ಕೆ ಮುಗ್ಧರಾಗಿಹೋದ ಗಂಧರ್ವರು ನಾಟ್ಯವಾಡತೊಡಗಿದರು. ಆಗಲೇ ಅವರ ಶರೀರಗಳಲ್ಲಿ ಲೋಪಿಸಿದ ಅವಯವಗಳೆಲ್ಲ ಕ್ರಮವಾಗಿ ಮೊಳೆತು ಎದ್ದುವು. ಬಹಳ ಸಂತೋಷದಲ್ಲಿ ಅವರೆಲ್ಲಾ ಶಿವನಿಗೆ ಕೃತಜ್ಞತಾಪೂರ್ವಕವಾಗಿ ನಮಸ್ಕರಿಸಿದರು.





ಶಿವನ ಗಾನದೊಳಗಿನ ಸಂಗೀತ ತರಂಗಗಳು ಸುತ್ತುಮುತ್ತಲಿನ ಪ್ರಕೃತಿಯನ್ನು ಅದ್ಭುತವಾದ ಸೌಂದರ್ಯ ಸೀಮೆಯಾಗಿ ಮಾರ್ಪಡಿಸಿಬಿಟ್ಟವು. ಮರಗಿಡಗಳಲ್ಲೆಲ್ಲಾ ಬಣ್ಣ ಬಣ್ಣದ ಹೂಗಳು ಅರಳಿದುವು. ಹೊಸ ಚಿಗುರುಗಳಿಂದ ಶಾರಾಜಿಸಿದುವು. ಗಾಳಿ ಮಲಯಮಾರುತವಾಗಿ ಬೀಸುತ್ತಿದ್ದಿತು. ಅಲ್ಲಿಯ ವಾತಾವರಣವು ಭುವಿಗೂ ದಿವಿಗೂ ನೂತನ ಶೋಭೆಯನ್ನು ಪ್ರಸಾದಿಸಿತ್ತು.

ಆಗ ಅಲ್ಲಿ ಮತ್ತೊಂದು ಅದ್ಭುತವೂ ನಡೆಯಿತು. ಶಿವನ ಮೃದುಮಧುರ ಗಾಯನದಲ್ಲಿ ತನ್ಮಯನಾಗಿ ಕೇಳುತ್ತಿದ್ದ ವಿಷ್ಣುವಿನ ಶರೀರದೊಂದು ಪೂರೆ ಕರಗಿ ಪ್ರವಹಿಸಲು ತೊಡಗಿತು. ಅದನ್ನು ಬ್ರಹ್ಮನೊಬ್ಬನು ಮಾತ್ರವೇ ನೋಡಿದನು.






ಕೂಡಲೇ ಬ್ರಹ್ಮನು ಆ ಜಲಧಾರೆಯನ್ನು ತನ್ನ ಕಮಂಡಲುವಿನಲ್ಲಿ ಹಿಡಿದುಕೊಂಡನು. ಆ ಜಲಧಾರೆಯೇ ಗಂಗಾನದಿಗೆ ಮೂಲ. ವಿಷ್ಣು ಶರೀರದ ಪೂರೆ ಕರಗಿ ಕಾಲಿನ ಮೂಲಕ ಪ್ರವಹಿಸಿದುದರಿಂದ ಗಂಗಾನದಿ ಪರಮ ಪವಿತ್ರವಾದುದೆಂದು ಖ್ಯಾತವಾಯಿತು.

# ಜ್ಞಾನೋದಯ

**ಚಿ**ತ್ರಪುರಿಯ ರಾಜನಾದ ಕೀರ್ತಿಸೇನನಿಗೆ ತಾನು ಕೆಲವು ವರ್ಷಗಳಲ್ಲೇ ಸತ್ತು ಹೋಗಲಿರುವೆನೆಂದು ತೋರುತ್ತಾ ಅದೊಂದು ದಿಗಿಲಾಗಿ ಹಿಡಿಯಿತು.

ಅದನ್ನು ಕಂಡುಹಿಡಿದ ಮಂತ್ರಿ ಧರ್ಮಸೇನನು ಅರಣ್ಯದಲ್ಲಿ ತಪಸ್ಸು ಮಾಡಿಕೊಂಡಿರುವ ಜ್ಞಾನಾನಂದನೆಂಬ ಋಷಿಯನ್ನು ದರ್ಶನ ಮಾಡುವಂತೆ ಕೀರ್ತಿಸೇನನಿಗೆ ಹೇಳಿದನು.

ಕೀರ್ತಿಸೇನನು ಋಷಿ ಜ್ಞಾನಾನಂದನನ್ನು ದರ್ಶಿಸಿ, ತನ್ನ ದಿಗಿಲಿನ ವಿಷಯವನ್ನು ಹೇಳಿ, "ನೀವು ಬಹು ದೊಡ್ಡ ತಪಸ್ವಿಗಳು, ತ್ರಿಕಾಲ ಜ್ಞಾನಿಗಳು. ಎಲ್ಲಾ ಬಲ್ಲವರು. ನನಗೆ ಮರಣ ಬಾರದಂತಿರುವ ದಾರಿ ಇದ್ದರೆ ತೋರಿಸುವಿರಾ ?" ಎಂದು ಕೇಳಿದನು.

ಜ್ಞಾನಾನಂದನು ಕಿರುನಗೆ ನಕ್ಕು, "ರಾಜಾ, ಈಗ ನೀನು ಯೌವನದಲ್ಲಿರುವಿ. ಯಾವಾಗಲೂ ಹೀಗೆಯೇ ಇರಬಲ್ಲೆನೆಂಬ ಭ್ರಮೆಯಲ್ಲಿ, ನೀನು ಮರಣವನ್ನು ನೆನೆದು ಹೆದರುತ್ತಿ. ಆದರೆ ಕಾಲಕ್ರಮದಲ್ಲಿ ಮುದುಕನಾಗುವಿ. ಕಣ್ಣಿನ ದೃಷ್ಟಿಯೂ, ಕೇಳುವ ಶಕ್ತಿಯೂ ತಗ್ಗುತ್ತವೆ, ಹಲ್ಲುಗಳೂ ಉದುರುತ್ತವೆ, ದೇಹದ ಬಲ ತಗ್ಗುತ್ತದೆ, ಸೊಂಟ ಬಾಗುತ್ತದೆ. ಇದೆಲ್ಲಾ ಪ್ರಕೃತಿ ಧರ್ಮ. ಆ ದಶೆಯಲ್ಲಿ ನಿನಗೆ ಇನ್ನೂ ಬದುಕಬೇಕೆಂಬ ಆಶೆ ಕ್ರಮವಾಗಿ ತಗ್ಗಿಹೋಗುತ್ತದೆ. ಹೀಗೆ ಯಾವುದೋ ಒಂದು ದಿನ ಬರಲಿರುವ ಸಾವಿಗಾಗಿ ದಿಗಿಲುಪಡಬೇಕಾದ ಅಗತ್ಯವೇ ಇಲ್ಲ" ಎಂದನು.

ಕೀರ್ತಿಸೇನನು ಜ್ಞಾನಾನಂದನಿಗೆ ನಮಸ್ಕರಿಸಿ, "ನನಗೆ ಜ್ಞಾನೋದಯವಾಗುವಂತೆ ಮಾಡಿದಿರಿ. ಸ್ವಾಮಿ, ನನ್ನನ್ನು ಹಿಡಿದು ಪೀಡಿಸುವ ದಿಗಿಲು ಪೂರ್ತಿ ಬಿಟ್ಟು ಹೋಯಿತು. ಬಂದ ಕೆಲಸ ತೀರಿತು" ಎಂದು ಹೇಳಿ ರಾಜಧಾನಿಗೆ ಹಿಂದಿರುಗಿದನು.





# ವಿದ್ಯಾಧಿಕಾರಿ

ಹಿಂದೆ ಚಂದ್ರಚೂಡನೆಂಬ ಒಬ್ಬ ರಾಜನಿದ್ದನು. ಅವನ ಆಸ್ಥಾನದಲ್ಲಿ ಗೌರಾಂಗ ಮತ್ತು ಗಂಭೀರ ಎಂಬ ಇಬ್ಬರು ಕವಿಗಳು ಅಲಂಕಾರಪ್ರಾಯರಾಗಿದ್ದರು. ಗೌರಾಂಗನು ಎಷ್ಟೋ ಕಾವ್ಯಗಳನ್ನು ರಚಿಸಿ ಮಹಾಕವಿ ಎಂದು ಪ್ರಖ್ಯಾತನಾಗಿದ್ದನು. ಅವನಿಗಿಂತ ಗಂಭೀರನು ವಯಸ್ಸಿನಲ್ಲಿ ಹತ್ತು ಹನ್ನೆರಡು ವರ್ಷ ಚಿಕ್ಕವನು. ಆದರೂ ವಿದ್ವತ್ತಿನ ವಿಷಯದಲ್ಲಿ ಅವನು ತುಂಬಿದ ಕೊಡವಾಗಿದ್ದನು. ಅವನೂ ಕಾವ್ಯಗಳನ್ನು ರಚಿಸಿ, ಹತ್ತು ಜನರಿಂದ ಪ್ರಶಂಸೆಗೆ ಪಾತ್ರನಾಗಿ ದೊಡ್ಡ ಕವಿ ಎನ್ನಿಸಿದ್ದನು.

ಸಾಹಿತ್ಯ ಪ್ರಿಯನಾದ ಚಂದ್ರಚೂಡ ರಾಜನನ್ನು ದರ್ಶನ ಮಾಡಲು ಎಲ್ಲೆಲ್ಲಿಂದಲೋ ಎಷ್ಟೋ ಮಂದಿ ಕವಿಗಳೂ ಪಂಡಿತರೂ ಬರುತ್ತಿದ್ದರು. ಹಾಗೆ ಬಂದವರಲ್ಲಿ ಅರ್ಹತೆಯುಳ್ಳವರನ್ನು ಉಚಿತ ರೀತಿಯಲ್ಲಿ ಸತ್ಕರಿಸಲಿಕ್ಕಾಗಿ ತಕ್ಕ ಸಲಹೆ ನೀಡುವಂತಹ ವಿದ್ವಾಂಸನೊಬ್ಬನು ಬೇಕೆಂಬ ಅಭಿಪ್ರಾಯ ರಾಜನಿಗೆ ಉಂಟಾಯಿತು.

ಚಂದ್ರಚೂಡ ರಾಜನು ತನ್ನ ಅಭಿಪ್ರಾಯವನ್ನು ಮಂತ್ರಿಯಾದ ಮಿಹಿರವರ್ಮನೊಂದಿಗೆ ಹೇಳಿದನು.

ಅದನ್ನು ಕೇಳಿ ಮಂತ್ರಿ ಸ್ವಲ್ಪ ಆಶ್ಚರ್ಯವನ್ನು ವ್ಯಕ್ತಪಡಿಸುತ್ತ, "ಮಹಾರಾಜಾ, ಗೌರಾಂಗನಂತಹ ಮಹಾಕವಿ ನಮ್ಮ ಆಸ್ಥಾನದಲ್ಲಿರುವಾಗ ಬೇರೆ ಯಾರನ್ನೋ ಹುಡುಕಬೇಕಾದ ಅಗತ್ಯವೇನಿದೆ? ಆತನನ್ನೇ ವಿದ್ಯಾಧಿಕಾರಿಯಾಗಿ ನಿಯಮಿಸಿ ಬಿಡಿರಿ. ಅಗತ್ಯ ಬಿದ್ದಾಗ ವಿದ್ವತ್ತಿಗೆ ಬೆಲೆಕಟ್ಟಿ ತಕ್ಕ ಸಲಹೆ ಹೇಳಲು ಆತನೇ ಸಮರ್ಥನು" ಎಂದನು.

ಮಂತ್ರಿಯ ಮಾತಿಗೆ ರಾಜನು ತಲೆಯಾಡಿಸಿ ಸುಮ್ಮನಾದನು.

ನಾಲ್ಕು ದಿನಗಳ ಮೇಲೆ ಲಲಾಟ ದೇಶದಿಂದ ಭೂಷಣನೆಂಬ ಕವಿ, ಚಂದ್ರಚೂಡ ರಾಜನನ್ನು ನೋಡಲು ಬಂದು, "ಮಹಾಪ್ರಭೂ, ತಮ್ಮ ಸಾಹಿತ್ಯ ಪ್ರಿಯತೆಯನ್ನೂ, ಅಭಿಮಾನವನ್ನೂ ಕೇಳಿ, ನನ್ನ ಪ್ರಥಮ ಕೃತಿಯೊಂದನ್ನು ತಮಗೆ ಸಮರ್ಪಿಸಬೇಕೆಂದು ತಂದಿದ್ದೇನೆ. ದಯವಿಟ್ಟು ನೋಡಬೇಕು" ಎಂದು ವಿನಂತಿಸಿಕೊಂಡನು.

ಚಂದ್ರಚೂಡನು ಭೂಷಣನು ಕೊಟ್ಟ ಕಾವ್ಯವನ್ನು ತೆಗೆದುಕೊಂಡು, ಅವನಿಗೆ ತಕ್ಕ ವಸತಿ ಸೌಕರ್ಯಗಳನ್ನು ಮಾಡಿಸಿದನು.

ಜಿ. ಜಿ. ರತ್ನ

ತರುವಾಯ ರಾಜನು ಗೌರಾಂಗನನ್ನು ಕರೆಯಿಸಿ, ಭೂಷಣನು ಕೊಟ್ಟ ಕಾವ್ಯವನ್ನು ಅವನ ಕೈಗೆ ಕೊಟ್ಟು, "ಓದಿ ನೋಡಿ, ನಿಮ್ಮ ಅಭಿಪ್ರಾಯ ತಿಳಿಸಿರಿ" ಎಂದನು.

ಮರುದಿನ ಗೌರಾಂಗನು ರಾಜನ ಸಬೆಗೆ ಬಂದು, "ಮಹಾರಾಜಾ, ಭೂಷಣ ಕವಿಯ ಕಾವ್ಯವನ್ನು ಪೂರ್ತಿಯಾಗಿ ಓದಿ ನೋಡಿದೆ. ಇದು ಈ ಕವಿಯ ಮೊದಲನೇ ಪ್ರಯತ್ನವಾದರೂ ಎಲ್ಲಿಯೂ ಒಂದೇ ಒಂದು ತಪ್ಪು ಕೂಡಾ ಕಾಣಲಿಲ್ಲ. ಚೆನ್ನಾಗಿಯೇ ಇದೆ" ಎಂದು ಹೇಳಿದನು.

ಮಹಾಕವಿ ಗೌರಾಂಗನು ಹೊರಟು ಹೋದ ಮೇಲೆ ರಾಜನು ಗಂಭೀರ ಕವಿಯನ್ನು ಬರಮಾಡಿಸಿ ಕೊಂಡನು.

ಭೂಷಣ ಕವಿಯ ಅದೇ ಕಾವ್ಯವನ್ನು ರಾಜನು ಗಂಭೀರನಿಗೆ ಕೊಟ್ಟು, "ಈ ಕಾವ್ಯವನ್ನು ಓದಿ ನೋಡಿ ಹೇಗಿರುವುದೆಂದು ಅಭಿಪ್ರಾಯ ಹೇಳಬೇಕು" ಎಂದನು.

ಎರಡು ದಿನಗಳ ಮೇಲೆ ಗಂಭೀರನು ರಾಜನ ಬಳಿಗೆ ಬಂದು, "ಮಹಾರಾಜಾ, ಈ ಕಾವ್ಯರಚನೆ ಮಾಡಿದ ಕವಿ ಹೊಸದಾಗಿ ಕಾವ್ಯರಚನೆ ಮಾಡಲು ತೊಡಗಿದ್ದಾನೆ. ಆದರೂ ಮೆಚ್ಚಿಕೊಳ್ಳುವಂತಹ ಎರಡು ಮೂರು ರಸವಂತವಾದ ಘಟ್ಟಗಳಿವೆ. ಒಳ್ಳೆಯ ಭವಿಷ್ಯ ಈ ಕವಿಗಿದೆ" ಎಂದನು.

ಗಂಭೀರನು ರಾಜನಿಂದ ಅಪ್ಪಣೆ ಪಡೆದು ಹೊರಟು ಹೋದ ಮೇಲೆ, ಚಂದ್ರಚೂಡ ರಾಜನು ಪಕ್ಕದಲ್ಲೇ ಇರುವ ಮಂತ್ರಿ ಮಿಹಿರವರ್ಮನನ್ನು ನೋಡಿ, "ವಿದ್ಯಾಧಿಕಾರಿಯಾಗಿ ನನಗೆ ತಕ್ಕ ಸಲಹೆ ಕೊಡಲು ಈ ಗಂಭೀರ ಕವಿಯನ್ನು ನಿಯಮಿಸುವ ನಿಶ್ಚಯಕ್ಕೆ ಬಂದಿದ್ದೇನೆ. ಅವನಿಗೆ ಆ ಪದವಿಯನ್ನು ಕೊಡುವ ಏರ್ಪಾಟು ಮಾಡಿರಿ" ಎಂದನು.

ಮಂತ್ರಿ ಮಿಹಿರವರ್ಮನು ಅತ್ಯಂತ ಆಶ್ಚರ್ಯ ಪಟ್ಟು, "ಇಷ್ಟೊಂದು ಮುಖ್ಯವಾದ ಪದವಿಯನ್ನು ಚಿಕ್ಕ ವಯಸ್ಸಿನ ಗಂಭೀರನಿಗೆ ಕೊಡುವುದೇ ? ಈ ಸಂಗತಿ ಕೇಳಿ ಮಹಾಕವಿಯೆಂದು ಹೆಸರುಪಡೆದ



ಗೌರಾಂಗನು ನೊಂದುಕೊಳ್ಳಬಹುದು. ಆದರೂ ಮಹಾರಾಜರು ಹೀಗೆ ನಿರ್ಣಯಿಸಲು ಏನೋ ಮುಖ್ಯವಾದ ಕಾರಣವಿರಬೇಕು. ಅದೇನೋ ಅಪ್ಪಣೆಯಾಗಲಿ" ಎಂದನು.

ಚಂದ್ರಚೂಡನು, "ಮಂತ್ರಿಗಳೇ, ಇದರಲ್ಲಿ ಮಹಾಕವಿ, ಸಾಧಾರಣ ಕವಿ ಎಂಬುದು ಮುಖ್ಯವಲ್ಲ. ಭೂಷಣನ ಕಾವ್ಯವನ್ನು ಓದಿ ಗೌರಾಂಗನೂ, ಗಂಭೀರನೂ ಏನು ಹೇಳಿದರೆಂದು ನೀವು ಕೂಡಾ ಕೇಳಿದ್ದೀರಿ. ನಿಮಗೆ ಗೊತ್ತಾಗದಿದ್ದುದು ಆಶ್ಚರ್ಯ" ಎಂದನು.

"ವ್ಯತ್ಯಾಸ ಗಮನಿಸಿದೆ. ಆದರೂ ದೊಡ್ಡತನವನ್ನು ಗಮನಿಸಬೇಡವೇ ಎಂದು ವಿನಂತಿಸಿಕೊಂಡೆ" ಎಂದನು ಮಂತ್ರಿ.

"ಈ ಕವಿಗಳಿಬ್ಬರೂ ಭೂಷಣ ಕವಿಯ ಕಾವ್ಯವನ್ನು ಓದಿ ಪರಿಶೀಲಿಸಿದ್ದಾರೆ. ವಿದ್ಯಾಧಿಕಾರಿಯಾಗುವ ಅರ್ಹತೆ ಗಂಭೀರನ ಪರಿಶೀಲನೆಯಲ್ಲಿದೆ. ಆಸ್ಥಾನಕ್ಕೆ ಬರುವ ಅನೇಕ ಬಗೆಯ ಕವಿ ಪಂಡಿತರನ್ನು ಆದರಿಸಿ ತಕ್ಕ ಪಾರಿತೋಷಕ ಕೊಟ್ಟು ಕಳುಹಿಸಲು ವಿದ್ಯಾಧಿಕಾರಿಯಲ್ಲಿ ಪಾಂಡಿತ್ಯದೊಂದಿಗೆ ಗಸಜ್ಞತೆ ಕೂಡಾ ಇರಬೇಕು. ದೋಷ ಹುಡುಕುವ ದೃಷ್ಟಿ ಮಾತ್ರ ಇದ್ದರೆ ಸಾಲದು. ಗುಣಗ್ರಹಣದ ಉದಾರತನವೂ ಇರಬೇಕು. ಗೌರಾಂಗನು ಹೊಸತಾಗಿ ಬಂದ ಭೂಷಣನ ದೋಷಗಳೆಷ್ಟೆಂದು ಹುಡುಕಿ ಅಂಥದ್ದೇನಿಲ್ಲವೆಂದರೆ, ಗುಣಗಳಾವುದೂ ಆತನ ದೃಷ್ಟಿಗೆ ಬಿದ್ದಿಲ್ಲವೆಂದೇ ಆಯಿತು" ಎಂದನು ರಾಜ.

ನಿಜವೇ ಎಂಬಂತೆ ಮಂತ್ರಿ ತಲೆಯಾಡಿಸಿದನು.

"ನಾವು ವಿದ್ಯಾಧಿಕಾರೀ ಪದವಿಯನ್ನು ಗೌರಾಂಗನಿಗೆ ಕೊಟ್ಟರೆ ಏನು ನಡೆದೀತೆಂಬುದನ್ನು ಹೇಳುತ್ತೇನೆ. ಅವನು ರಾಜಾಶ್ರಯವನ್ನು ಆಶಿಸಿ ಬರುವ ಕವಿ ಪಂಡಿತರೊಳಗಿನ ತಪ್ಪುಗಳನ್ನೇ ಹುಡುಕಲು ನೋಡುತ್ತಾನೆ. ಅದೇ ಪದವಿ ಗಂಭೀರನಿಗಿದ್ದರೆ, ಅವರಲ್ಲಿ ಮೆಚ್ಚುವಂತಹ ಪಾಂಡಿತ್ಯವೋ. ಕವಿತಾಂಶವೋ ಎಷ್ಟರಮಟ್ಟಿಗಿದೆ ಎಂಬುದನ್ನು ನೋಡುತ್ತಾನೆ, ಬೆಲೆ ಕಟ್ಟುತ್ತಾನೆ. ಆ ಪದವಿಯನ್ನು ಏರ್ಪಡಿಸಿದುದರ ಪ್ರಯೋಜನವು ಹತ್ತು ಮಂದಿಗೆ ಸಿಗಬೇಕಾದರೆ, ಗಂಭೀರನೇ ಅದಕ್ಕೆ ತಕ್ಕವನು" ಎಂದನು ಚಂದ್ರಚೂಡ.

ಮಂತ್ರಿ ರಾಜನ ಅಭಿಪ್ರಾಯವನ್ನು ತುಂಬ ಸರಿ ಎಂದು ಒಪ್ಪಿದನು. ಅದರಂತೆ ಗಂಭೀರನು ಆಸ್ಥಾನದ ವಿದ್ಯಾಧಿಕಾರಿಯಾದನು. ಅವನು ಆ ಪದವಿಯಲ್ಲಿ ಅನೇಕ ಕವಿ ಪಂಡಿತರಿಗೆ ರಾಜಾದರಣೆ ಲಭಿಸುವಂತೆ ಮಾಡಿ, ಉದಾರನೂ, ವಿವೇಕಿಯೂ ಎಂದು ಎಲ್ಲರಿಂದಲೂ ಪ್ರಶಂಸಿಸಲ್ಪಟ್ಟನು.





# ಮಾವಯ್ಯನ ಮಾತು

ವಾಮನಕೇರಿ ಎಂಬ ಗ್ರಾಮದಲ್ಲಿ ನಾಗೇಂದ್ರನೆಂಬ ಗೃಹಸ್ಥನಿದ್ದನು. ಅವನ ಹೆಂಡತಿಯ ಹೆಸರು ವರಲಕ್ಷ್ಮಿ. ಆ ದಂಪತಿಗಳು ಆ ಗ್ರಾಮದೊಳಗಿನ ಆಸ್ತಿವಂತರಲ್ಲಿ ಒಬ್ಬರಾಗಿದ್ದರು. ಅವರಿಗೆ ಗೋವಿಂದನೆಂಬ ಒಬ್ಬನು ಮಗನಿದ್ದನು. ಅವರ ಒಬ್ಬನೇ ಒಬ್ಬ ಮಗನಾದ ಗೋವಿಂದನು ವಿದ್ಯೆ ಕಲಿಯುವುದರಲ್ಲಿ ಒಳ್ಳೆಯ ತಿಳಿವಳಿಕೆಯುಳ್ಳವನೇ ಆದರೂ, ಮನೆಯೊಳಗಿನ ಕೆಲಸ ಕಾರ್ಯಗಳನ್ನು ಸ್ವಲ್ಪವೂ ಲಕ್ಷಿಸದೆ, ಯಾವಾಗಲೂ ಗೆಳೆಯರನ್ನು ಕಟ್ಟಿಕೊಂಡು ತಿರುಗಾಡಿಕೊಂಡಿರುವವನು.

ಹೀಗಿರುವಾಗ ಒಂದು ದಿನ ಗೋವಿಂದನ ಸೋದರಮಾವನು, ತನ್ನ ತಂಗಿಯನ್ನು ನೋಡಲಿಕ್ಕಾಗಿ ಬಂದನು. ಆಗ ತನ್ನ ಸೋದರಳಿಯನಾದ ಗೋವಿಂದನ ಸಂಗತಿಯನ್ನು ತಿಳಿದು ಅವನು ಹಾಗೆ ಕಂಡವರೊಂದಿಗೆ ತಿರುಗಲು, ಅವನ ತಾಯಿ ತಂದೆಯರೇ ಕಾರಣವೆಂದು ಕೋಪದಿಂದ ಹೇಳಿದನು.

“ನಾವೇನು ಮಾಡಲು ಸಾಧ್ಯ? ಎಷ್ಟು ಹೇಳಿದರೂ, ಅವನೇನೂ ಹಚ್ಚಿಕೊಳ್ಳುವುದಿಲ್ಲ” ಎಂದರು ವರಲಕ್ಷ್ಮಿಯೂ, ನಾಗೇಂದ್ರನೂ.

ಸೋದರಮಾವನು ಗೋವಿಂದನನ್ನು ಕರೆದು, “ಏನಿದು ಗೋವಿಂದಾ, ನಿನ್ನ ಅಮ್ಮ ಅಪ್ಪಂದಿರು ನಿನ್ನನ್ನು ನಿನ್ನ ಇದಿರಿನಲ್ಲೇ ಬಯ್ಯುತ್ತಾರೆ. ಸ್ನೇಹಿತರು ಹಿಂದಿನಿಂದ ನಿನಗೆ ತಿಳಿಯದಂತೆ ಬಯ್ಯುತ್ತಾರೆ. ಒಟ್ಟಿನ ಮೇಲೆ ಕೈಲಾಗದವನನ್ನು ಯಾರೂ ಗೌರವಿಸುವುದಿಲ್ಲ, ಗೊತ್ತಾ?” ಎಂದನು.

“ನನ್ನ ಸ್ನೇಹಿತರು ಅಂಥವರೇನಲ್ಲ ಮಾವಾ” ಎಂದನು ಗೋವಿಂದ.

“ಹಾಗೇನು? ನಿನ್ನ ಸ್ನೇಹಿತರ ನಿಜರೂಪ ತಿಳಿಯಬೇಕಾದರೆ ಒಂದು ಉಪಾಯವಿದೆ. ನಿನ್ನ ದೊಡ್ಡತನವನ್ನೂ, ಸಾಮರ್ಥ್ಯವನ್ನೂ ಅವರ ಹತ್ತಿರ ವಿಪರೀತವಾಗಿ ಹೊಗಳಿಕೋ. ಆಗ ಅವರು ಏನು ಮಾಡುತ್ತಾರೋ ನೋಡು” ಎಂದನು ಸೋದರಮಾವ.

ಗೋವಿಂದನು ಹಾಗೆಯೇ ಮಾಡಿದನು. ಅವನು ಹೊಗಳಿಕೊಳ್ಳುವಾಗ ಮೊದಲು ಆ ಸ್ನೇಹಿತರು ಏನೋ ಕುಶಾಲಿಗೆ ಹೇಳಿಕೊಳ್ಳುತ್ತಾನೆಂದುಕೊಂಡರು. ಆದರೆ ಅವನು ನಿಜವಾಗಿಯೇ ತನ್ನ ದೊಡ್ಡತನಗಳನ್ನು ಹೇಳುತ್ತಿದ್ದಾನೆಂದು ತಿಳಿದ ಮೇಲೆ,



"ಏನೋ, ತಾಯಿಯ ತವರು ಮನೆಯ ಸಂಗತಿ ಸೋದರಮಾವನಿಗೆ ಗೊತ್ತಿಲ್ಲವೇ ಎಂಬ ಹಾಗೆ, ನಿನ್ನ ದೊಡ್ಡತನವೆಲ್ಲ ಎಷ್ಟರ ಮಟ್ಟಿನದೆಂದು ನಿನ್ನೊಂದಿಗಿರುವ ನಮಗೆ ಗೊತ್ತಿಲ್ಲವೆಂದು ಕೊಂಡೆಯಾ ? " ಎಂದರು ಕೇಳಲಿಷ್ಟವಿಲ್ಲದವರಂತೆ.

ಆದರೂ ಗೋವಿಂದನು ತನ್ನ ಅಭ್ಯಾಸವನ್ನು ಬಿಡದೆ "ನಮ್ಮ ಮನೆಯಲ್ಲಿ ನನ್ನ ಮಾತಿಗೆ ಎಷ್ಟು ಬೆಲೆಕೊಡುತ್ತಾರೆಂದು ನಿಮಗೆ ಗೊತ್ತಿಲ್ಲ. ವ್ಯವಸಾಯ ಕೆಲಸಗಳಿಂದ ಹಿಡಿದು ಎಷ್ಟೋ ವಿಷಯಗಳಲ್ಲಿ ಎಲ್ಲವೂ ನನ್ನ ಸಲಹೆಯ ಪ್ರಕಾರವೇ ಮಾಡಿ ಕೊಂಡಿರುತ್ತಾರೆ. ಬೇಕಾದರೆ ನನ್ನ ಅಪ್ಪನ ಹತ್ತಿರ ಕೇಳಿ ನೋಡಿ, ಅಮ್ಮನನ್ನು ಕೇಳಿ ನೋಡಿ. ಮಾವಯ್ಯನನ್ನು ಕೇಳಿ ನೋಡಿ" ಎಂದನು.

ತನ್ನನ್ನು ಕುರಿತು ಇಲ್ಲದ ಸಲ್ಲದ ದೊಡ್ಡಸ್ತಿಕೆ ಹೇಳಿಕೊಳ್ಳುವುದನ್ನು ಗೋವಿಂದನು ಬಿಡುವುದಿಲ್ಲ ವೆಂದು ತಿಳಿದುಕೊಂಡು ಅವನ ಸ್ನೇಹಿತರು ಕ್ರಮ ವಾಗಿ ಅವನನ್ನು ಬಿಟ್ಟು ದೂರದೂರವಾಗ ತೊಡಗಿದರು. ಒಂದು ತಿಂಗಳು ಕಳೆಯುವಷ್ಟರಲ್ಲಿ ಅವನಿಗೆ ಗ್ರಾಮದಲ್ಲಿ ಸ್ನೇಹಿತರೇ ಇಲ್ಲದೆ ಹೋದರು.

ಆಗ ಗೋವಿಂದನು ಸೋದರಮಾವನ ಬಳಿಗೆ ಹೋಗಿ, "ನೀವು ಹೇಳಿದ್ದು ತುಂಬಾ ನಿಜ. ನನ್ನ ಸ್ನೇಹಿತರು ಅಸೂಯೆ ತುಂಬಿದವರು. ನನ್ನ ದೊಡ್ಡ ತನಗಳನ್ನು ಕೇಳಿ ಸಹಿಸಲಾಗದವರು. ಇಷ್ಟು ಕಾಲ ಅವರೊಂದಿಗೆ ತಿರುಗಿ ನನ್ನ ಕಾಲ ವನ್ನು ವ್ಯಥಾ ಮಾಡಿಕೊಂಡೆನು. ಈಗ ನಾನೇನು ಮಾಡಬೇಕೆಂದು ನೀವೇ ಹೇಳಿ" ಎಂದನು.

"ನಿನ್ನ ತಂದೆತಾಯಿಗಳ ಮಾತನ್ನು ಕೇಳಿ, ಅವರು ಹೇಳಿದಂತೆ ಮಾಡಿ, ಅವರನ್ನು ಸಂತೋಷಪಡಿಸು. ಹಾಗೆ ಮಾಡಿದರೇ ನಿನಗೆ ಒಳ್ಳೆಯದಾಗುತ್ತದೆ" ಎಂದನು ಸೋದರಮಾವ.

"ನನ್ನ ಅಪ್ಪ ಅಮ್ಮಂದಿರು ಮಾತ್ರ ಆ ಸ್ನೇಹಿತರ ಹಾಗಿನವರಲ್ಲವೆಂದು ಹೇಗೆ ನಂಬ ಬೇಕು ? " ಎಂದನು ಗೋವಿಂದ ಅನುಮಾನದಿಂದ.

"ನಿನ್ನನ್ನು ಕುರಿತು ನೀನು ಎಷ್ಟು ಹೊಗಳಿ ಕೊಂಡರೂ ಅವರು ಸಂತೋಷದಿಂದ ಕೇಳುತ್ತಾರೆ. ತಾಳಿಕೊಳ್ಳುತ್ತಾರೆ. ಸ್ವಲ್ಪವೂ ಅಸೂಯೆ ಪಡುವು ದಿಲ್ಲ" ಎಂದನು ಸೋದರಮಾವ.

ಆಮೇಲೆ ಸೋದರಮಾವನು ವರಲಕ್ಷ್ಮಿ ಯೊಂದಿಗೂ ನಾಗೇಂದ್ರನೊಂದಿಗೂ, ಗೋಪಾಲನು ತನ್ನನ್ನು ತಾನು ಎಷ್ಟು ಹೊಗಳಿಕೊಂಡರೂ ಕೇಳಿ, ಹೌದು ಹೌದೆನ್ನಬೇಕೆಂದು ಸಲಹೆ ಮಾಡಿದನು.

ಆ ದಿನದಿಂದ ಗೋವಿಂದನು ತನ್ನ ತಾಯಿ ತಂದೆಯರೊಂದಿಗೆ ತನ್ನ ದೊಡ್ಡಸ್ತಿಕೆಗಳನ್ನು ಹೊಗಳಿಕೊಂಡನು. ಅವರು ಬಹಳ ಸಹನೆಯಿಂದ, ಅಭಿಮಾನದಿಂದ ತನ್ನ ಮಾತುಗಳನ್ನು ಕೇಳುವುದನ್ನು ನೋಡಿ, ಅವನಿಗೆ ಅವರ ಮೇಲೆ ಪ್ರೇಮವೂ, ವಿಶ್ವಾಸವೂ, ಗೌರವವೂ ಮೂಡಿತು. ಅವರು

ಹೇಳಿದ ಹಾಗೆ ಮನೆ ಕೆಲಸಗಳಲ್ಲಿ ಮನಸ್ಸು ಹರಿಸಿದನು. ವ್ಯವಸಾಯ ಕಾರ್ಯಗಳಲ್ಲಿಯೂ ಅವರಿಗೆ ಸಹಾಯಮಾಡಲು ತೊಡಗಿದನು.

ಸೋದರಳಿಯನಲ್ಲಿ ಬಂದ ಮಾರ್ಪಾಟನ್ನು ನೋಡಿ ಸೋದರಮಾವನಿಗೆ ಸಂತೋಷವಾಯಿತು. ಅವನು ತನ್ನ ಊರಿಗೆ ಹಿಂದಿರುಗುವಾಗ ಗೋವಿಂದ ನನ್ನು ಕರೆದು, "ಎಲೋ, ಒಂದು ಹೇಳುತ್ತೇನೆ ಕೇಳು. ಯಾವಾಗಲೂ ಒಂದೇ ವಿಧವಾಗಿ ಹೊಗಳಿ ಕೊಂಡಿದ್ದರೆ ತೀರ ಬೇಕಾದವರಿಗೆ ಕೂಡಾ ಬೇಸರ ಬರುತ್ತದೆ. ಒಂದು ಕೆಲಸ ಮಾಡು. ಈ ದಿನದಿಂದ ದೊಡ್ಡ ದೊಡ್ಡ ಕಾವ್ಯಗಳನ್ನೂ ಕಥೆಗಳನ್ನೂ ಓದಲು ಪ್ರಾರಂಭಮಾಡು. ಅವುಗಳಲ್ಲಿ ಮಂತ್ರಿಗಳು ರಾಜ ರನ್ನೂ, ಭಕ್ತರು ದೇವರನ್ನೂ, ಹೆಂಡತಿಯರು ಗಂಡಂದಿರನ್ನೂ ಎಷ್ಟೋ ವಿಧವಾಗಿ ಹೊಗಳಿದ ವಿವರ ಗಳಿರುತ್ತವೆ. ಆ ಹೊಗಳಿಕೆಗಳನ್ನೆಲ್ಲಾ ನೀನು ಸ್ವಂತ ಮಾಡಿಕೋ. ಅದು ಹೇಗೆ ಮಾಡಿಕೊಳ್ಳುವುದು ಅಂತ ಅವುಗಳನ್ನೆಲ್ಲ ಓದುತ್ತಿದ್ದರೆ ಗೊತ್ತಾಗುತ್ತದೆ" ಎಂದನು.

ಗೋವಿಂದನು ಸೋದರಮಾವನ ಸಲಹೆಯ ಪ್ರಕಾರವೇ ಕಥೆಗಳನ್ನೂ ಕಾವ್ಯಗಳನ್ನೂ ಓದಲು ಪ್ರಾರಂಭಿಸಿದನು. ಮಗನಲ್ಲಿ ಬಂದ ಬದಲಾವಣೆ ಯನ್ನು ನೋಡಿ ತಂದೆಗೂ ತಾಯಿಗೂ ಸಂತೋಷ ವಾದುದೇನೋ ನಿಜವೇ. ಆದರೆ ಅವನು ಈಗ ತನ್ನನ್ನು ತಾನು ಹೊಗಳಿಕೊಳ್ಳುವುದರ ಜತೆಯಲ್ಲಿ ತಂದೆತಾಯಿಯರನ್ನು ಕೂಡಾ ಅರ್ಥವಿಲ್ಲದ ಹೊಗಳಿಕೆಗಳಿಂದ ಬೇಸರ ಪಡಿಸುತ್ತಿದ್ದಾನೆ. ಇದನ್ನು ತಾಳಲಾಗದೆ ಅವರು ಅವನಿಗೆ ಸ್ವಲ್ಪ ಹೊರಗೆ ಹೋಗಿ ತಿರುಗಾಡಿ ಬರಲು ಹೇಳತೊಡಗಿದರು. ಗ್ರಾಮದಲ್ಲಿ ಎಲ್ಲರಿಗೂ ಅವನ ಸಂಗತಿ ತಿಳಿದು ಹೋದುದರಿಂದ, ಊರವರು ಅವನನ್ನು ಮಾತಾಡಿ ಸುತ್ತಿರಲಿಲ್ಲ. ಕಂಡರೆ ತಪ್ಪಿಸಿಕೊಳ್ಳುತ್ತಿದ್ದರು.



ಕಡೆಗೆ ಒಂದು ದಿನ ಗೋವಿಂದನ ತಾಯಿ ಗಂಡ ನೊಂದಿಗೆ, "ಏನೊಂದ್ರೆ ಇದು. ನಮ್ಮ ಹುಡುಗನ ಹೊಗಳಿಕೆಯ ರೋದನೆ ತಾಳಿಕೊಳ್ಳುವುದು ಕಷ್ಟ ವಾಗಿದೆ. ಇದಕ್ಕೇನಾದರೂ ಉಪಾಯ ನೋಡಿರಪ್ಪ" ಎಂದಳು.

"ಇದಕ್ಕೆ ಎಂತಹ ಉಪಾಯವೋ? ಏನೂ ತೋರುವುದಿಲ್ಲ. ಅವನಿಗೆ ಮದುವೆ ಮಾಡಿಬಿಟ್ಟರೆ ಆ ರೋದನೆಯನ್ನೆಲ್ಲಾ ಅವನ ಹೆಂಡತಿಯೇ ತಾಳಿ ಕೊಳ್ಳುತ್ತಾಳೆ" ಎಂದನು ನಾಗೇಂದ್ರ.

ಹೀಗೆಂದುಕೊಂಡು ಅವರಿಬ್ಬರೂ ಗೋವಿಂದನಿಗೆ ಮದುವೆ ಮಾಡುವ ಪ್ರಯತ್ನಕ್ಕೆ ತಲೆಹಾಕಿದರು. ಅಷ್ಟರಲ್ಲೇ ಅವನಿಗೆ ಬಾಯಿಪಟಾಕಿಗಾರನೆಂದೂ, ತನ್ನ ತಾನೇ ಹೊಗಳಿಕೊಳ್ಳುವವನೆಂದೂ, ಆ ರೋದನೆ ಯಾರಿಗೂ ತಾಳಲಾಗದೆಂದೂ ಊರೆಲ್ಲಾ ಗೊತ್ತಾಗಿ, ಅವನಿಗೆ ಹುಡುಗಿ ಕೊಡಲು ಯಾರೂ ಮುಂದೆ ಬರಲಿಲ್ಲ.



ಆ ಸಮಯದಲ್ಲಿ ಗೋವಿಂದನ ಸೋದರಮಾವ ಅವರ ಮನೆಗೆ ಬಂದು, ಅಲ್ಲಿಯ ಪರಿಸ್ಥಿತಿಯನ್ನು ತಿಳಿದುಕೊಂಡು, "ಎಂಥವರಪ್ಪ ನೀವು? ಉಯ್ಯಾಲೆಯಲ್ಲಿ ಹುಡುಗನನ್ನು ಇಟ್ಟುಕೊಂಡು ಊರೆಲ್ಲಾ ಹುಡುಕಲು ತಿರುಗಿದಂತೆ, ನನ್ನ ಮಗಳು ರಾಧೆ ಇರುವಾಗ ಅವನಿಗೆ ಬೇರೆ ಸಂಬಂಧ ನೋಡಲು ತಿರುಗುವುದೇಕೆ?" ಎಂದು ಕೇಳಿದನು.

ಅದನ್ನು ಕೇಳಿ ಗೋವಿಂದನ ತಂದೆಯೂ ತಾಯಿಯೂ ಮುಖ ಮುಖ ನೋಡಿಕೊಂಡರು. ರಾಧೆ ಗೋವಿಂದನಿಗೆ ತಕ್ಕ ಈಡಿನವಳೆಂದು ಅವರಿಗೆ ಗೊತ್ತಿತ್ತು. ಆದರೆ ಆ ಹುಡುಗಿ ಪರಮ ನಾಸ್ತಿಕಳು. ಸ್ವಲ್ಪವೂ ದೈವಭಕ್ತಿ ಇಲ್ಲದವಳು. ಪೂಜೆಗಳೂ ವ್ರತಗಳೂ ಅಂದರೆ ಅವಳಿಗಾಗದು.

ಸೋದರಮಾವಯ್ಯ ಹೇಳಿದ ಮಾತು ಕೇಳಿ ಗೋವಿಂದನ ತಾಯಿತಂದೆಯರು, "ಎಲ್ಲರೂ ನಮ್ಮ ಗೋವಿಂದನಿಗೆ ಹುಡುಗಿ ಕೊಡಲು ಹಿಂಜರಿಯುತ್ತಿರುವಾಗ, ನೀವು ಕೂಡಾ ಒಪ್ಪಲಾರಿರೆಂದುಕೊಂಡು ನಾವು ಸುಮ್ಮನಿದ್ದೆವು. ನಿಮಗೆ ಇಷ್ಟವಿದ್ದರೆ ನಮಗೂ ಇಷ್ಟವೇ" ಎಂದರು.

ಆಮೇಲೆ ಸೋದರಮಾವನ ಮಗಳು ರಾಧೆಯೊಂದಿಗೆ ಗೋವಿಂದನಿಗೆ ಮದುವೆಯಾಯಿತು. ಈಗ ಗೋವಿಂದನು ತನ್ನ ದೊಡ್ಡತನವನ್ನು ಕುರಿತು ಹೆಂಡತಿಯೊಂದಿಗೆ ಹೆಚ್ಚಳಿಕೆ ಹೇಳಿಕೊಳ್ಳತೊಡಗಿದನು. ಇದರಿಂದ ಅವನ ತಂದೆತಾಯಿಗಳ ಜೀವಕ್ಕೆ ಹಾಯ್ಯೆನಿಸಿತು. ಈ ನೆಮ್ಮದಿಗೆ ಕಾರಣಳಾದ ಸೊಸೆ ರಾಧೆಯ ಮೇಲೆ ಅವರಿಗೆ ತುಂಬಾ ಪ್ರೇಮಾಭಿಮಾನ ಉಂಟಾಯಿತು.

ರಾಧೆಗೆ ಅತ್ತೆಯ ಮನೆಯಲ್ಲಿ ಸುಖವಾಗಿದ್ದರೂ ಗಂಡನು ಹೇಳಿಕೊಳ್ಳುವ ಹೆಚ್ಚಳಿಕೆಗಳ ಗೋಳನ್ನು ತಾಳಿಕೊಳ್ಳಲು ಕಷ್ಟವಾಗತೊಡಗಿತು. ಅವಳು ಬಹಳ ಆಲೋಚನೆ ಮಾಡಿ ದಿನಾ ಏನೋ ಒಂದು ಪೂಜೆಯನ್ನೋ, ವ್ರತವನ್ನೋ ನಿಯಮವನ್ನೋ ಮಾಡಲು ಪ್ರಾರಂಭಿಸಿದಳು. ಅವಳು ಅಂತಹ ಕೆಲಸಗಳಲ್ಲಿರುವಾಗ ಗೋವಿಂದನು ಅವಳ ಮುಂದೆ ತನ್ನ ಹೊಗಳಿಕೆಯ ಗಂಟನ್ನು ಬಿಚ್ಚಲಾಗಲಿಲ್ಲ. ಈ ಉಪದ್ರವ ತಪ್ಪಿದುದರಿಂದ ರಾಧೆಯಲ್ಲಿ ನಾಸ್ತಿಕ ಭಾವ ಇಂಗಿ ದೈವಭಕ್ತಿ ಬೆಳೆದುಕೊಂಡಿತು. ಅವಳ ನಾಸ್ತಿಕತೆ ಹೋಗಿ ಆಸ್ತಿಕತೆಯುವಳಾದುದರಿಂದ ಅತ್ತೆ ಮಾವಂದಿರು ಬಹು ಸಂತೋಷಪಟ್ಟು, ರಾಧೆಯ ತಂದೆಯೊಂದಿಗೆ ತಮ್ಮ ಸಂತೋಷವನ್ನು ಹೇಳಿಕೊಂಡರು.

ಅದನ್ನು ಕೇಳಿ ಗೋವಿಂದನ ಸೋದರಮಾವನಿಗೆ ಆಶ್ಚರ್ಯವಾಯಿತು. ತನ್ನ ಮಗಳಲ್ಲಿ ಇಷ್ಟು ದೊಡ್ಡ ಮಾರ್ಪಾಡು ಹೇಗೆ ಬಂತೆಂದು ಅವನಿಗೆ ತಿಳಿಯಲಿಲ್ಲ.

ಅಂತಲೇ ಮಗಳನ್ನು ನೋಡಲು ಹೊರಟು ಬಂದನು. ಆಗ ರಾಧೆ ತಂದೆಯಲ್ಲಿ ತನ್ನ ಮಾರ್ಪಾಡಿನ

ನಿಜವಾದ ಕಾರಣವನ್ನು ವಿವರಿಸಿ ಹೇಳಿದಳು. ಒಬ್ಬ ನಾಸ್ತಿಕಳನ್ನು ಆಸ್ತಿಕಳಾಗಿ ಮಾಡಿದ ಗೋವಿಂದನ ಹೊಗಳು ಗೋಳು ಅದ್ಭುತ ಶಕ್ತಿಯುಳ್ಳದ್ದೆಂದು ಅವನಿಗೆ ತೋರಿತು. ಆದರೆ ಮಗಳಿಗೆ ಗಂಡನ ಮೇಲೆ ಇರಬೇಕಾದಷ್ಟು ಆದರವು ಇಲ್ಲವೆಂದು ತಿಳಿದು ಆತಂಕವೂ ಆಯಿತು. ಗಂಡನೆಂದರೆ ರಾಧೆಗೆ ಏನೋ ಕೆಟ್ಟ ಭಯ.

ಗೋವಿಂದನನ್ನು ಹೇಗಾದರೂ ಒಳ್ಳೆಯ ರೀತಿಗೆ ಬದಲಾಯಿಸಬೇಕೆಂದುಕೊಂಡು ಮಾವಯ್ಯನು ಅವನನ್ನು ಊರ ಹೊರಗೆ ಕರೆದುಕೊಂಡು ಹೋಗಿ, "ಎಲೋ ಗೋವಿಂದಾ, ನಿನ್ನನ್ನು ಪ್ರಯೋಜನವಿಲ್ಲದ ಸ್ನೇಹಿತರಿಂದ ಬೇರ್ಪಡಿಸಬೇಕೆಂದು ಸ್ವಂತ ಹೊಗಳಿಕೆ ಪ್ರಾರಂಭಿಸಲಿಕ್ಕೆ ಹೇಳಿದೆ. ಅದೀಗ ನಿನ್ನಲ್ಲಿ ಚೆನ್ನಾಗಿ ಬೆಳೆದು ಬೇಕಾದವರಿಗೆಲ್ಲ ತಲೆನೋವು ಬರಿಸುವ ಹಾಗಾಯಿತು. ಅವರೆಲ್ಲಾ ನಿನ್ನನ್ನು ನೋಡಿ ಹೆದರುವ ಹಾಗಾಯಿತು. ಇದು ನಿನಗೂ ಒಳ್ಳೆಯದಲ್ಲ, ಇತರರಿಗೂ ಒಳೆಯದಲ್ಲ. ನೀನು ಇನ್ನು ಈ ದುರಭ್ಯಾಸ ಬಿಟ್ಟುಬಿಡಬೇಕು" ಎಂದನು.

"ನನಗೆ ಬಾಯಿಪಟಾಕಿ ಚೆನ್ನಾಗಿ ಅಂಟಿಕೊಂಡು ಹೋಯಿತು. ನಿಮ್ಮಿಂದಲೇ ಬಂದ ಅದು ಬಿಟ್ಟು ಹೋಗಲಿಕ್ಕೂ ನೀವೇ ಉಪಾಯ ಹೇಳಿಬಿಡಿ ಮಾವಯ್ಯಾ" ಎಂದನು ಗೋವಿಂದ.

ಮಾವಯ್ಯನು ಸ್ವಲ್ಪ ಆಲೋಚಿಸಿ, "ಸರಿ. ನಾನು ಹೇಳಿದಂತೆ ಮಾಡು. ಈಗಿನಿಂದ ಇದಿರಿನಲ್ಲಿರುವವರೊಂದಿಗೆ ಮಾತಾಡುವಾಗ ನಿನ್ನನ್ನು ಹೊಗಳಿಕೊಳ್ಳುವುದಕ್ಕೆ ಬದಲಾಗಿ ಅವರನ್ನು ಹೊಗಳಲು ಪ್ರಾರಂಭಿಸು. ಆಮೇಲೆ ಏನಾಗುತ್ತದೋ ನೋಡು" ಎಂದನು.

ಗೋವಿಂದನು ಸೋದರಮಾವ ಹೇಳಿದಂತೆ ಈ ಹೊಸ ಪದ್ಧತಿಯನ್ನು ಪ್ರಾರಂಭಿಸಿದನು. ಕ್ರಮವಾಗಿ ಅವನಿಗೆ ಸ್ನೇಹಿತರು ಹೆಚ್ಚಿದರು. ಮನೆಯಲ್ಲಿರುವವರು ಕೂಡಾ ಅವನ ಮಾತನ್ನು ಕೇಳಲು ಇಷ್ಟಪಟ್ಟರು. ಆದರೆ ಇಷ್ಟು ಕಾಲ ತನ್ನನ್ನೇ ಹೊಗಳಿಕೊಳ್ಳಲು ಪಳಗಿಹೋದ ಗೋವಿಂದನಿಗೆ ಇತರರನ್ನು ಹೊಗಳುವುದು ಬೇಸರವೆನಿಸಿತು. ಆದುದರಿಂದ ಕ್ರಮವಾಗಿ ಅವನ ಧ್ವನಿ ತಗ್ಗಿ ಹೋಯಿತು. ಸುಮ್ಮನಿದ್ದರೆ ಏನೋ ಒಂದು ಮಾತಾಡಬೇಕಾಗುವುದೆಂದು ಅವನು ಯಾವಾಗಲೂ ಏನೋ ಒಂದು ಮನೆಗೆಲಸದಲ್ಲಿ ಮಗ್ನನಾಗಿರ ತೊಡಗಿದನು.

ಹೀಗೆ ಕಾಲ ಕಳೆಯುತ್ತಿರಲು ಗೋವಿಂದನು ಒಳ್ಳೆಯ ಕಾರ್ಯದಕ್ಷನೆಂದು ಹೆಸರು ಪಡೆದನು. ಬಂಧು ಬಳಗದವರೂ, ಸ್ನೇಹಿತರೂ ಸಹಾ ಅವನ ಮೇಲೆ ಅಭಿಮಾನ ತಾಳಿಕೊಂಡಿದ್ದರು.





# ಅನುಕೂಲೆಯಾದ ಮಡದಿ

ಒಂದಾನೊಂದು ಊರಿನಲ್ಲಿ ಒಬ್ಬಾನೊಬ್ಬ ರೈತನಿದ್ದನು. ಅವನ ಹೆಂಡತಿಗೆ ತನ್ನ ಗಂಡನ ಮೇಲೆಯೇ ಗುರಿಯಾಗಿತ್ತು. ಅವನು ಮಾಡುವ ಕೆಲಸವನ್ನು ಗೌರವದಿಂದ ಲಕ್ಷ್ಯವಿಟ್ಟು ನೋಡುವಳು. ಅವನು ಎಂತಹ ಕೆಲಸ ಮಾಡಿದರೂ ಅವಳಿಗೆ ದೊಡ್ಡದಾಗಿಯೇ ಕಾಣುತ್ತಿತ್ತು. ಅವರಿಗೆ ಬೇಕಾದಷ್ಟು ಹಾಲು ಕರೆಯುವ ಎರಡು ದನಗಳಿದ್ದುವು. ಆದುದರಿಂದ ಅವರು ಹಾಲು ಹೈನು, ಕಾಳು ಬೇಳೆಗಳಿಗೆ ಯಾವ ಕೊರತೆಯೂ ಇಲ್ಲದೆ ಸುಖವಾಗಿ ಸಂಸಾರ ನಡೆಸಿಕೊಂಡಿದ್ದರು. ರೈತನ ಹೆಂಡತಿ ತನ್ನ ಜಾಣತನದಿಂದ ನೂರು ರೂಪಾಯಿಗಳನ್ನು ಪ್ರತ್ಯೇಕವಾಗಿಟ್ಟುಕೊಂಡಿದ್ದಳು.

ಒಂದು ದಿನ ಅವಳು ತನ್ನ ಗಂಡನೊಂದಿಗೆ, "ನೋಡೀಂದ್ರೆ, ನಮಗೆ ಒಂದು ದನ ಮಾತ್ರವೇ ಸಾಕಾಗುತ್ತದೆ. ದನಗಳಿಗೆ ಚಾಕರಿ ಮಾಡುವುದೂ ಕಷ್ಟವೇ. ಒಂದು ದನವನ್ನು ಒಯ್ದು ಮಾರಿ ಬಂದು ಬಿಡಿ. ಇಷ್ಟರವರೆಗೆ ನಾನು ಕೂಡಿಸಿಟ್ಟ ಹಣವನ್ನು ಮುಟ್ಟದೆ, ಹಬ್ಬ ಹರಿದಿನಗಳಿಗೆ ಖರ್ಚು ಮಾಡಲು ಹಣ ಕೈಯಲ್ಲಿ ಹಗುರಾಗಿರುತ್ತದೆ" ಎಂದಳು.

ರೈತನು ಅದಕ್ಕೆ ಒಪ್ಪಿಕೊಂಡು ತನ್ನ ಎರಡು ದನಗಳಲ್ಲಿ ಒಂದನ್ನು ಮಾರಲು ನಗರಕ್ಕೆ ತೆಗೆದುಕೊಂಡು ಹೋದನು. ಅಲ್ಲಿ ಅವನು ಎಷ್ಟು ಪ್ರಯತ್ನಿಸಿದರೂ ದನಕ್ಕೆ ಗಿರಾಕಿ ಸಿಗಲಿಲ್ಲ. "ಮಾರದೇಹೋದರೆ ಏನು ಮುಳುಗಿಹೋಯಿತ್ತು ? ನಮ್ಮ ಸೊತ್ತು ನಮ್ಮ ಹತ್ತಿರವೇ ಇರುತ್ತದೆ" ಎಂದುಕೊಂಡು ರೈತನು ದನದೊಂದಿಗೆ ಮನೆಯ ದಾರಿ ಹಿಡಿದನು.

ದಾರಿಯಲ್ಲಿ ಒಬ್ಬ ಮನುಷ್ಯನು ಒಂದು ಕುದುರೆಯೊಂದಿಗೆ ಇದಿರಾಗಿ ಬಂದನು. ರೈತನು ಅವನನ್ನು ಮಾತಾಡಿಸಿ, ದನಕ್ಕಿಂತ ಕುದುರೆ ಹಗುರವೆಂದುಕೊಂಡು ತನ್ನ ದನವನ್ನು ಅವನಿಗೆ ಕೊಟ್ಟು ಅವನ ಕುದುರೆಯನ್ನು ತಾನು ತೆಗೆದುಕೊಂಡನು.

ಸ್ವಲ್ಪ ಮುಂದೆ ಹೋಗಲು ಒಬ್ಬ ಮನುಷ್ಯನು ಒಂದು ಮೇಕೆಯೊಂದಿಗೆ ಇದಿರಾಗಿ ಬರುವುದು ಕಂಡಿತು.

ರೈತನು ಆ ಮನುಷ್ಯನಿಗೆ ಕುದುರೆಯನ್ನು ಕೊಟ್ಟು ಅದಕ್ಕಿಂತ ಹಗುರಾದ ಮೇಕೆಯನ್ನು ತೆಗೆದುಕೊಂಡನು.

ಇನ್ನೂ ಸ್ವಲ್ಪದೂರ ಹೋದಾಗ ಒಬ್ಬನು ಒಂದು ಬಾತುಕೋಳಿಯನ್ನು ನಡೆಯಿಸಿಕೊಂಡು ಬಂದನು. ರೈತನು ಅವನಿಗೆ ಮೇಕೆಯನ್ನು ಕೊಟ್ಟು ಬಾತುಕೋಳಿಯನ್ನು ತೆಗೆದುಕೊಂಡನು.

ಮತ್ತಷ್ಟು ಮುಂದೆ ಹೋಗಲು ಒಬ್ಬನು ಒಂದು ಹುಂಜವನ್ನು ಕೈಯಲ್ಲಿಟ್ಟುಕೊಂಡು ಬರುವುದು ಕಂಡಿತು. ಅಂತಲೇ ಅದು ಬಾತುಕೋಳಿಗಿಂತ ಹಗುರವೆಂದುಕೊಂಡು, ಬಾತುಕೋಳಿಯನ್ನು ಅವನಿಗೆ ಕೊಟ್ಟು ಹುಂಜವನ್ನು ತಾನು ತೆಗೆದುಕೊಂಡನು.

ಅವನ ಮನೆ ಇನ್ನೂ ಬಹಳ ದೂರದಲ್ಲಿತ್ತು. ರೈತನಿಗೆ ಹೊಟ್ಟೆಯಲ್ಲಿ ಹಸಿವೆಯು ಸಂಕಟವೆದ್ದಿತು. ಆದುದರಿಂದ ಅವನು ದಾರಿಯಲ್ಲಿ ಒಂದು ಮನೆಯವರಿಗೆ ಆ ಹುಂಜವನ್ನು ಕೊಟ್ಟು ಹೊಟ್ಟೆ ತುಂಬಾ ಊಟಮಾಡಿ ಬರಿಗೈಯಿಂದಲೇ ತನ್ನ ಊರಿಗೆ ಹೋಗಿ ಸೇರಿಕೊಂಡನು.




ಆಗ ರೈತನಿಗೆ ತನ್ನ ಮನೆಯ ಪಕ್ಕದಲ್ಲಿರುವವನೊಬ್ಬನು ಕಾಣಿಸಿ, "ನಗರಕ್ಕೆ ಹೋಗಿಬರುವಿಯಾ ? ಒಳ್ಳೇ ವ್ಯಾಪಾರಮಾಡಿ ಬಂದೆಯಾ ?" ಎಂದನು.

ರೈತನು ತಾನು ಮಾಡಿದ ವ್ಯಾಪಾರದ ಸಂಗತಿಯನ್ನೆಲ್ಲಾ ಅವನೊಂದಿಗೆ ಹೇಳಿದನು. ಅದನ್ನು ಕೇಳಿ ಪಕ್ಕದ ಮನೆಯವನು "ಅಯ್ಯಯ್ಯೋ !" ಎಂದು ಉದ್ಗರಿಸಿದನು.

"ಏಕೆ ? ಮುಖ್ಯವಾಗಿ ದನ ನನ್ನ ಹೆಂಡ್ತೀಗೆ ಭಾರವಾಯ್ತು. ಹಗುರಾದ್ದು ಇರಬೇಕೆಂದಳು. ಎಲ್ಲಕ್ಕೂ ಮುಖ್ಯ ದೇಹ ಕಾಪಾಡಿಕೊಳ್ಳುವುದು. ಇದರಲ್ಲೇನು ತಪ್ಪಿದೆ ?" ಎಂದನು ರೈತ.

"ಮನೆಗೆ ಹೋದರೆ ತಿಳಿಯುತ್ತದೆ. ನೀನು ಮಾಡಿದ ತಪ್ಪಿಗೆ ನಿನ್ನ ಹೆಂಡ್ತೀ ಹೇಗೆ ಬೈತಾಳೋ ನೋಡು !" ಎಂದನು ಪಕ್ಕದ ಮನೆಯವನು.

"ನನ್ನವಳು ಹಾಗೆಲ್ಲಾ ಬಯ್ಯುವವಳೇ ಅಲ್ಲ" ಎಂದನು ರೈತ.

"ಎಷ್ಟೇ ಒಳ್ಳೆಯವಳಾದರೂ ಈ ದಿನ ನೀನು ಮಾಡಿದ ತಪ್ಪಿಗೆ ಮಾಡು ಹಾರೋಹಾಗೆ ಆಗುತ್ತೆ. ನೋಡುತ್ತಿರು !" ಎಂದು ದೃಢವಾಗಿ ಹೇಳಿದನು ಪಕ್ಕದ ಮನೆಯವನು.

"ಹಾಗೇನೂ ಇಲ್ಲ" ಎಂದ ರೈತ.

ಇಬ್ಬರೂ ಪಂಥಕ್ಕೆ ಬಿದ್ದರು.

"ನನ್ನ ಹತ್ತಿರ ಪ್ರತ್ಯೇಕವಾಗಿ ನೂರು ರೂಪಾಯಿ ಇದೆ. ನನ್ನ ಹೆಂಡ್ತೀ ನನ್ನ ಮೇಲೆ ತಪ್ಪು ಕಟ್ಟಿ ಬೈದು ರಂಪ ಮಾಡಿದರೆ ಆ ನೂರರ ಗಂಟು ನಿನಗೇ ಕೊಡುತ್ತೇನೆ" ಎಂದನು ರೈತ.

"ಅವಳು ಖಂಡಿತಾ ನಿನ್ನೊಡನೆ ಜಗಳಾಡುತ್ತಾಳೆಂದು ನಾನೂ ನೂರು ರೂಪಾಯಿ ಪಂಥ ಒಡ್ಡುತ್ತೇನೆ" ಎಂದನು ಪಕ್ಕದ ಮನೆಯವನು.

"ಹಾಗಾದರೆ ನೀನು ನನ್ನೊಂದಿಗೆ ಬಂದು ಜಗಲೀಲಿ ಕುಳಿತುಕೊಂಡು, ಒಳಗೆ ನಡೆಯುವ ನಮ್ಮ ಮಾತುಗಳನ್ನು ಕೇಳಿಕೋ" ಎಂದು

ರೈತನು ಪಕ್ಕದ ಮನೆಯವನನ್ನು ಕರೆದುಕೊಂಡು ಮನೆಯನ್ನು ತಲಪಿ, ಅವನನ್ನು ಜಗಲಿಯಲ್ಲಿ ಕೂಡಿಸಿ, ತಾನು ಒಳಗೆ ಹೋದನು.

"ಓ! ಬಂದುಬಿಟ್ಟಿರಾ? ದನ ಮಾರಿದಿರಷ್ಟೆ? ಎಷ್ಟು ರೂಪಾಯಿಗೆ ಹೋಯಿತು?" ಎಂದು ಕೇಳಿದಳು ರೈತನ ಹೆಂಡತಿ.

"ಯಾರೂ ಕೇಳಲು ಬರಲಿಲ್ಲ. ಆದ್ದರಿಂದ ಅದನ್ನು ಕೊಟ್ಟು ಒಂದು ಕುದುರೆ ತೆಗೆದುಕೊಂಡೆ" ಎಂದನು ರೈತ.

"ಒಳ್ಳೇ ಕೆಲಸಮಾಡಿದಿರಿ, ಒಂದು ಬಂಡಿ ಕೊಂಡುಕೊಂಡರೆ ಎಲ್ಲಿಗಾದರೂ ನಾವು ಹಾಯಾಗಿ ಹೋಗಬಹುದು" ಎಂದಳು ಹೆಂಡತಿ.

"ಕುದುರೆ ತರಲಿಲ್ಲ. ಅದನ್ನು ಕೊಟ್ಟು ಒಂದು ಮೇಕೆ ಕೊಂಡುಕೊಂಡೆ" ಎಂದ ರೈತ.

"ಒಳ್ಳೇದೇ ಆಯ್ತು. ಕುದುರೆ ಸಾಕುವುದು ಕಷ್ಟ. ಮೇಕೆಯಾದರೆ ಅದರ ಪಾಡಿಗೆ ಮೇದು ಕೊಂಡಿರುತ್ತೆ. ಎಲ್ಲಿದೆ?" ಎಂದಳು ಹೆಂಡತಿ.

"ತಡೀ ಹೇಳ್ತೇನೆ. ಒಂದು ಬಾತುಕೋಳೀನ ನೋಡಿ, ಮೇಕೇನ ಕೊಟ್ಟು ಅದನ್ನು ತೆಗೆದು ಕೊಂಡೆ" ಎಂದ ರೈತ.

"ಒಳ್ಳೇ ಕೆಲಸಮಾಡಿದಿರಿ. ಮೇಕೇ ಹಿಂದೆ ತಿರುಗೋದು ಬಹಾಳ ಕಷ್ಟ" ಎಂದಳು ಹೆಂಡತಿ.

"ಆ ಬಾತುಕೋಳೀನ ಹಗುರಾದ ಒಂದು ಹುಂಜಕ್ಕೆ ಕೊಟ್ಟು ತಕ್ಕೊಂಡು ಬಿಟ್ಟೆ" ಎಂದ ರೈತ.

"ನಾನೂ ಅದೇ ಹೇಳುವಾಂತ ಇದ್ದೆ. ಬೆಳಿಗ್ಗೆ ಬೇಗ ಏಳಲಿಕ್ಕೆ ಹುಂಜವೇ ಸಿಕ್ಕಿದ್ದು ಒಳ್ಳೇದಾಯ್ತು" ಎಂದಳು ಹೆಂಡತಿ.

"ಕಡೆಗೆ ಏನಾಯಿತು ಗೊತ್ತಾ? ದಾರಿಯಲ್ಲಿ ಹಸಿವೆಯಿಂದ ಬವಳಿ ಬರುವ ಹಾಗಾಗಿಬಿಟ್ತು. ಅದಕ್ಕಾಗಿ ಆ ಹುಂಜವನ್ನು ಒಬ್ಬರಿಗೆ ಕೊಟ್ಟು ಹೊಟ್ಟೆ ತುಂಬ ಇಷ್ಟು ಉಂಡು ಚುರುಕಾಗಿ ಬಂದೆ" ಎಂದನು ರೈತ.

"ಅಬ್ಬ! ಸುಖವಾಗಿ ಬಂದಿರಲ್ಲ! ಹುಂಜ ಹೋದರೆ ಹೋಯಿತು. ಜೀವಕ್ಕಿಂತ ಹೆಚ್ಚೇ ಹುಂಜ!" ಎಂದಳು ಹೆಂಡತಿ.

ರೈತನು ಹೊರಗೆ ಬಂದು ತನ್ನೊಂದಿಗೆ ಪಂಥ ಕಟ್ಟಿದ ಪಕ್ಕದ ಮನೆಯವನೊಂದಿಗೆ, "ಕೇಳಿದೆ ಯಷ್ಟೇ ನಮ್ಮ ಸಂಭಾಷಣೆ?" ಎಂದನು.

"ಕೇಳಿದೆ, ಕೇಳಿದೆ. ನನ್ನ ಮನೆಗೆ ಬಂದು ನೀನು ಗೆದ್ದುಕೊಂಡ ನೂರು ರೂಪಾಯಿ ತೆಗೆದುಕೋ" ಎಂದು ಪಕ್ಕದ ಮನೆಯವನು ಜಗಲಿಯಿಂದ ಕೆಳಗೆ ಇಳಿದನು.

ಹೆಂಡತಿ ಅನುಕೂಲೆಯಾದುದರಿಂದ ರೈತನಿಗೆ ದನದ ಬೆಲೆಯ ಇಮ್ಮಡಿ ಲಾಭವೇ ದೊರಕಿತು.





# ಶಿವಪುರಾಣ

ಕುಮಾರಿಯ ವಿವಾಹದ ವಿಷಯದಲ್ಲಿ ಸಂಶಯಾವಸ್ಥೆಯಲ್ಲಿರುವ ಅನರಣ್ಯನಿಗೆ, ಮಂತ್ರಿಗಳು ಈ ರೀತಿಯಾಗಿ ಆಲೋಚನೆ ಹೇಳಿದರು :

"ಮಹಾರಾಜಾ, ಪದ್ಮಾವತಿಯಂತಹ ಸ್ತ್ರೀ, ಈ ಮಹಾಮುನಿಯಂತಹವನನ್ನು ಮದುವೆಯಾಗಲು ಬಯಸಬಹುದು. ಏಕೆಂದರೆ ಈತನು ದೊಡ್ಡ ವಂಶದಲ್ಲಿ ಹುಟ್ಟಿದವನು. ಕುಲಕ್ಕೇ ಶ್ರೇಷ್ಠನಾಗಿರುವವನು. ಅಂತಹ ಮಹನೀಯನಿಗೆ ಕನ್ಯೆಯನ್ನು ದಾನಮಾಡುವುದು ಬಹುದೊಡ್ಡ ಸತ್ಕಾರ್ಯವಾಗಿದೆ. ಶುಭಕಾರ್ಯವೂ ಹೌದು. ಈತನನ್ನು ಪದ್ಮಾವತಿಗೆ ತೋರಿಸಿ, ಆಕೆ ವಿವಾಹಕ್ಕೆ ಅಂಗೀಕರಿಸಿದ ಪಕ್ಷದಲ್ಲಿ ಹಾಗೆಯೇ ವಿವಾಹ ಮಾಡಿಬಿಡುವುದೇ ಒಳ್ಳೆಯದು. ಅವಳು ಒಪ್ಪದೇಹೋದ ಪಕ್ಷದಲ್ಲಿ ಈ ಮುನೀಶ್ವರನು ಹೊರಟುಹೋಗುವನೆಂದು ನಂಬೋಣ."

ಈ ಸಲಹೆಯನ್ನು ಕೇಳಿ ಅನರಣ್ಯನಿಗೆ ದೊಡ್ಡ ಚಿಂತೆಯ ಭಾರ ಹಗುರಾದಂತೆ ತೋರಿತು. ಪಿಪ್ಪಲಾದ ಮಹಾಮುನಿಯನ್ನು ನೋಡಿ ಪದ್ಮಾವತಿ ಆತನನ್ನು ವರಿಸಲು ತನ್ನ ಅಂಗೀಕಾರವನ್ನು ತಿಳಿಸಿದಳು. ಮಗಳ ಒಪ್ಪಿಗೆಯನ್ನು ತಿಳಿದು ಅನರಣ್ಯರಾಜನು ಬಹಳ ಸಂತೋಷದಿಂದ ಅವರಿಬ್ಬರನ್ನು ಹೊಂದಿಸಿ ವಿವಾಹಮಾಡಿ ದೊಡ್ಡ ಕೀರ್ತಿ ಸಂಪಾದಿಸಿಕೊಂಡನು.

ವಿವಾಹವಾದ ಮೇಲೆ ಪಿಪ್ಪಲಾದನು ಪದ್ಮಾವತಿಯನ್ನು ತನ್ನೊಂದಿಗೆ ಕರೆದುಕೊಂಡು ಋಷ್ಯಾಶ್ರಮಕ್ಕೆ ಹೋದನು. ಕುಮಾರಿಯ ಮೇಲಿನ ಪ್ರೇಮದಿಂದ ಅನರಣ್ಯನು ಕೂಡಾ, ತನ್ನ ರಾಜ್ಯವನ್ನು ಹಿರಿಯ ಮಗನಿಗೆ ಒಪ್ಪಿಸಿ, ತನ್ನ ಐದು ಮಂದಿ ಪತ್ನಿಯರನ್ನೂ ಕರೆದುಕೊಂಡು ಕುಮಾರಿ ಇರುವ ಪ್ರದೇಶಕ್ಕೇ ಹೋಗಿ ವಾನಪ್ರಸ್ಥಾಶ್ರಮ ಸ್ವೀಕರಿಸಿಕೊಂಡನು.

ಒಂದುದಿನ ಪದ್ಮಾವತಿ ಸ್ನಾನಮಾಡಲು ನದಿಗೆ ಹೋದಾಗ, ಧರ್ಮದೇವನು ನವಮನ್ಮಥನಂತಹ ಯುವಕನ ರೂಪದಲ್ಲಿ ಅವಳ ಹತ್ತಿರ ಬಂದು,

## ೮. ಪಾರ್ವತೀ ಕಲ್ಯಾಣ



“ಸುಂದರೀ, ನಿನ್ನ ಈ ಸೌಂದರ್ಯಕ್ಕೆ ತಕ್ಕವನಾದ ಗಂಡನು ನಾನೇ. ಆ ಮುದುಕ ಗಂಡನೊಂದಿಗೆ ಸಂಸಾರ ಸಾಗಿಸುತ್ತ, ನಿನ್ನ ಯೌವನವನ್ನು ಅರಣ್ಯದಲ್ಲಿ ಸುರಿದ ಬೆಳುದಿಂಗಳ ಹಾಗೆ ಹಾಳುಮಾಡದೆ, ನನ್ನೊಂದಿಗೆ ನನ್ನ ರಾಜ್ಯಕ್ಕೆ ಬಂದು ಮಹಾರಾಣಿಯಾಗಿ ಸಂತೋಷದಿಂದ ಬದುಕು. ನಡೆ, ಹೋಗೋಣ” ಎಂದನು.

ಅದನ್ನು ಕೇಳಿ ಪದ್ಮಾವತಿ ಅತ್ಯಂತ ಆಗ್ರಹಾವೇಶಗೊಂಡು, “ಮೋಹಾಂಧನೇ! ನನ್ನ ಪತಿಯನ್ನು ನಿಂದಿಸಿದ ನೀನು ಕ್ಷಯಿಸಿ ಹೋಗು” ಎಂದು ಶಪಿಸಿಬಿಟ್ಟಳು.

ಧರ್ಮದೇವನು ಬೆದರಿಬಿದ್ದು, “ಅಮ್ಮಾ, ನಾನು ಯಾವ ರಾಜನೂ ಅಲ್ಲ. ಧರ್ಮದೇವನು. ನಿನ್ನ ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದೆನು. ನನ್ನನ್ನು ಮನ್ನಿಸಿ ಶಾಪವನ್ನು ಉಪಸಂಹರಿಸಿಕೋ” ಎಂದು ಬೇಡಿಕೊಂಡನು.

ಪದ್ಮಾವತಿ ಕೂಡಾ ಕೋಪದಿಂದ ದುಡುಕಿ ಶಪಿಸಿದುದಕ್ಕೆ ನೊಂದುಕೊಂಡು, “ಶಾಪವನ್ನು ಉಪಸಂಹರಿಸಿಕೊಳ್ಳಲು ನನಗೆ ಸಾಧ್ಯವಿಲ್ಲವಲ್ಲಾ! ಆದರೆ ಒಮ್ಮೆಲೇ ನಿನಗೆ ಆ ಶಾಪವು ಫಲಿಸದಿರಲಿ. ನಿನಗೆ ನಾಲ್ಕು ಪಾದಗಳೆಂದು ಭಾವಿಸಿ ಒಂದೊಂದು ಯುಗದಲ್ಲಿ ಒಂದೊಂದು ಪಾದವನ್ನು ಕಳೆದುಕೊಳ್ಳುತ್ತ, ಸಂಚರಿಸಿಕೊಂಡಿರು ಧರ್ಮದೇವಾ” ಎಂದಳು.

ವಸಿಷ್ಠನು ಹೀಗೆ ಪದ್ಮಾವತಿಯ ಕಥೆಯನ್ನು ಹೇಳಿ, “ಮೇನಕಾ, ಹಿಮವಂತರೇ! ನೀವು ಕೂಡಾ ಅನರಣ್ಯನು ಮಾಡಿದ ಹಾಗೆಯೇ, ನಿಮ್ಮ ಕುಮಾರಿಯ ಇಷ್ಟದಂತೆಯೇ ಆ ಪರಮ ಶಿವನಿಗೆ ಕೊಟ್ಟು ಮದುವೆ ಮಾಡಿ ನಿಶ್ಚಿಂತರಾಗಿಬಿಡಿರಿ” ಎಂದನು.

ಈಗ ಮೇನಕಾ ಹಿಮವಂತರು ತೃಪ್ತರಾದರು. ಮೈನಾಕನೇ ಮೊದಲಾದ ಬಂಧುಗಳೆಲ್ಲರೂ ಶಿವ ಪಾರ್ವತಿಯರ ವಿವಾಹಕ್ಕೆ ಸುಮುಖರಾದರು.

ಆಗ ಮೇನಕಾ ಹಿಮವಂತರು ಪಾರ್ವತಿಯನ್ನು ಅರುಂಧತೀ ವಸಿಷ್ಠರ ಕೈಗಳಲ್ಲಿಟ್ಟು, “ನಿಮ್ಮ ಇಷ್ಟ ಪ್ರಕಾರವೇ ಈ ಹುಡುಗಿಯನ್ನು ಶಿವನಿಗೆ ಕೊಟ್ಟು ವಿವಾಹ ಮಾಡೋಣ. ವಿವಾಹಕ್ಕೆ ತಕ್ಕ ಮುಹೂರ್ತವನ್ನು ನಿಶ್ಚಯಿಸಿ ಹೇಳಬೇಕು” ಎಂದರು.

ಅರುಂಧತಿ ಪಾರ್ವತಿಯನ್ನು ಲೋಕಮಾತೆಯಾಗುವಂತೆ ಆಶೀರ್ವಾದ ಮಾಡಿದಳು. ಮಾಘ ಶುದ್ಧ ಏಕಾದಶಿಯ ದಿನ. ಆರ್ದ್ರಾ ನಕ್ಷತ್ರದಲ್ಲಿ ವೃಶ್ಚಿಕ ಲಗ್ನದಲ್ಲಿ ಬೆಳಂಜಾಮದಲ್ಲಿ ಮುಹೂರ್ತವೆಂದು ನಿಶ್ಚಯಿಸಲ್ಪಟ್ಟಿತು. ಶಿವಪಾರ್ವತಿಯರ ವಿವಾಹವು ನಿಶ್ಚಯವಾದುದನ್ನು ತಿಳಿದು ಎಲ್ಲರಿಗೂ ಸಂತೋಷವಾಯಿತು.

ಇಷ್ಟು ತಿಳಿದ ಮೇಲೆ ಸಪ್ತ ಮಹರ್ಷಿಗಳು ಶಿವನ ಬಳಿಗೆ ಹಿಂದಿರುಗಿ ಬಂದು, ಹೋದ ಕೆಲಸವು ಶುಭಕರವಾಗಿ ಅನುಕೂಲವಾಯಿತೆಂದು ಹೇಳಿದರು.



ಮುಂದಿನ ಕೆಲಸಗಳಿಗಾಗಿ ಬ್ರಹ್ಮ, ವಿಷ್ಣು, ಇಂದ್ರಾದಿಗಳನ್ನು ನಿಯಮಿಸುವಂತೆ ಹೇಳಿ ಸಪ್ತರ್ಷಿಗಳು ಹೊರಟು ಹೋದರು.

ಪಾರ್ವತಿಯ ವಿವಾಹಕ್ಕೆ ಬೇಕಾದ ಏರ್ಪಾಟುಗಳೆಲ್ಲಾ ಸಂಪ್ರದಾಯಬದ್ಧವಾಗಿ ನಡೆಯತೊಡಗಿತು. ಹಿಮವಂತನು ತನ್ನ ಮಂತ್ರಿಗಳ ಮೂಲಕ ಮಾಡಬೇಕಾದುದನ್ನೆಲ್ಲಾ ಮಾಡಿಸಿದನು, ಬಂಧುಬಳಗದವರಿಗೆ ಶುಭಾಹ್ವಾನಗಳು ಹೋದವು. ಪಾರ್ವತಿಯನ್ನು ಮದುಮಗಳನ್ನಾಗಿ ಮಾಡಲು ಪಟ್ಟಣದೊಳಗಿನ ಮುತ್ತೈದೆಯರೆಲ್ಲರೂ ಬಂದು ಸೇರಿದರು.

ಶುಭ ಮುಹೂರ್ತ ನೋಡಿ ಪಾರ್ವತಿಗೆ ಮಂಗಳ ಸ್ನಾನಮಾಡಿಸಿದರು. ಪಟ್ಟೆಯ ಸೀರೆಯನ್ನು ಉಡಿಸಿದರು. ಆಭರಣಗಳಿಂದ ಅಲಂಕರಿಸಿದರು. ಕಸ್ತೂರಿಯ ತಿಲಕವಿಟ್ಟು ಹೂಮುಡಿಸಿ ಜಲ್ಲಿ ಬಿಟ್ಟರು. ಪುನುಗು, ಜವ್ವಾದಿ, ಹರಿಚಂದನಗಳನ್ನು ಪೂಸಿದರು. ಅಂದವಾದ ಪುಷ್ಪಹಾರವನ್ನು ಕೊರಳಿಗೆ ಹಾಕಿ ಪಾರ್ವತಿಯನ್ನು ಮದುಮಗಳನ್ನಾಗಿ ಮಾಡಿದರು.

ಪಾರ್ವತೀ ಕಲ್ಯಾಣಕ್ಕಾಗಿ ಕಳುಹಿಸಲ್ಪಟ್ಟ ಆಹ್ವಾನದಂತೆ ಹಿಮವಂತನ ಬಂಧುಮಿತ್ರ ಬಳಗದವರೆಲ್ಲಾ ಸಕುಟುಂಬ ಪರಿವಾರದೊಂದಿಗೆ ಬಂದು ಕೂಡಿದರು. ಅವರು ತಮ್ಮೊಂದಿಗೆ ಬಂಗಾರದ ತಾಮರೆ ಪುಷ್ಪಗಳನ್ನೂ, ಮುತ್ತು ಹವಳ, ಮಾಣಿಕ್ಯಗಳನ್ನೂ ಕಾಣಿಕೆಗಳಾಗಿ ತಂದರು. ಬೇರೆ ಪರ್ವತಗಳ ರಾಜರು ನವರತ್ನಗಳನ್ನೂ, ಚಂದನ ಮೊದಲಾದ ಸುಗಂಧ ದ್ರವ್ಯಗಳನ್ನೂ, ಮದ್ದಾನೆಗಳನ್ನೂ, ಸೈಂಧವಾಶ್ವಗಳನ್ನೂ ಉಡುಗೊರೆ ಕೊಡಲು ತಂದರು. ಹಿಮವಂತನು ಆ ಕಾಣಿಕೆಗಳನ್ನೆಲ್ಲಾ ಸ್ವೀಕರಿಸಿ, ಅತಿಥಿಗಳಿಗೆ ಗೌರವ ಮರ್ಯಾದೆಗಳನ್ನು ಚೆನ್ನಾಗಿ ಸಲಿಸಿದನು. ಬಂದವರಿಗೆಲ್ಲಾ ಸಕಲ ಸೌಕರ್ಯಗಳಿಂದ ಕೂಡಿದ ಬಿಡದಿಗಳನ್ನು ಏರ್ಪಡಿಸಿಕೊಟ್ಟನು. ಅನ್ನದಾನಗಳೂ, ಭೂರಿ ಭೋಜನಗಳೂ ಧಾರಾಳವಾಗಿ ನಡೆಯುವಂತೆ ಮಾಡಿದನು. ಎಲ್ಲಿ ನೋಡಿದರೂ ಸಂತೋಷ, ಸಂಭ್ರಮ, ಸಡಗರ.

ಬಂದವರಿಗೆಲ್ಲ ಬಿಡದಿಗಳ ನಿರ್ಮಾಣಕ್ಕೂ, ಕಲ್ಯಾಣ ಮಂಟಪವನ್ನು ನಿರ್ಮಿಸಲಿಕ್ಕೂ ಹಿಮವಂತನು ವಿಶ್ವಕರ್ಮನ ಸಹಾಯವನ್ನು ಪಡೆದಿದ್ದನು. ಹತ್ತು ಸಾವಿರ ಯೋಜನ ವಿಸ್ತಾರ ಸ್ಥಳದಲ್ಲಿ ಕಲ್ಯಾಣ ಮಂಟಪವು ನಿರ್ಮಾಣಗೊಂಡಿತ್ತು. ಹಿಮವಂತನಿರುವ ಓಷಧೀಪುರವು ಅತ್ಯದ್ಭುತವಾಗಿ ಅಲಂಕರಿಸಲ್ಪಟ್ಟಿತು.

ಕೈಲಾಸದಲ್ಲಿ ಶಿವನು ಹಿಮವಂತನು ಕಳುಹಿಸಿದ ಲಗ್ನಪತ್ರಿಕೆಯನ್ನು ಪಡೆದುಕೊಂಡು, ಸಂತೋಷದಿಂದ ವಾಯುದೇವನನ್ನು ಕಳುಹಿಸಿ, ನಾರದನನ್ನು ಬರಮಾಡಿಕೊಂಡನು. ಶಿವನು ನಾರದನನ್ನು ನೋಡಿ, "ನಾರದಾ, ಇನ್ನು ಐದು ದಿನಗಳಲ್ಲಿ ನನಗೆ ಹಿಮ



ದಲ್ಲಿ ಶಿವಪಾರ್ವತಿಯರಿಗೆ ಓಷಧೀಪುರದಲ್ಲಿ ವಿವಾಹ ನಡೆಯಲಿದೆ, ನೀವೆಲ್ಲರೂ ಬಂದು ನಡೆಯಿಸಿ ಕೊಡಬೇಕೆಂದು ಶಿವನು ಆಹ್ವಾನಿಸುತ್ತಾನೆ" ಎಂದು ನಾರದನು ಕರೆಕೊಟ್ಟನು. ಆಮೇಲೆ ನಾರದನು ಕುಬೇರನನ್ನು ಕರೆದುಕೊಂಡು, ಅವನಿಂದ ಮದುವೆಗೆ ಬೇಕಾದ ವಸ್ತು, ಸಾಮಗ್ರಿಗಳನ್ನೂ ಸಾಗಿಸಿಕೊಂಡು ಕೈಲಾಸಕ್ಕೆ ತಿರುಗಿ ಬಂದನು.

ಹೀಗೆ ಶಿವನಿಂದ ಆಹ್ವಾನಿಸಲ್ಪಟ್ಟ ಬ್ರಹ್ಮನು ಪುರೋಹಿತನಾಗಿ ಬಂದನು. ವಿಷ್ಣು ಬಾವಯ್ಯನ ಪಾತ್ರ ವಹಿಸಿದನು. ಇಂದ್ರಾದಿ ದೇವತೆಗಳೂ ಋಷಿಗಳೂ ವಿವಾಹ ಮಹೋತ್ಸವದ ಸದಸ್ಯರಾಗಿರುವಂತೆ ನಿರ್ಣಯಿಸಲ್ಪಟ್ಟರು. ಆ ಮುಹೂರ್ತ ಸಂದರ್ಭದಲ್ಲಿ ಗರುಡ, ಗಂಧರ್ವ, ಯಕ್ಷಸ್ತ್ರೀಯರೂ, ಸಪ್ತ ಮಾತೃಕೆಯರೂ, ಲಕ್ಷ್ಮಿ, ಸರಸ್ವತಿ, ಶಚೀ, ಅರುಂಧತಿಯರಂತಹ ಮಹಾ ಪತಿವ್ರತೆಯರೂ ಶಿವನಿಗೆ ಮಂಗಳಾಭಿಷೇಕ ಮಾಡಲು ಬೃಹಸ್ಪತಿ ಮುಹೂರ್ತವಿಟ್ಟು ಹೇಳಿದನು. ಆ ಮುಹೂರ್ತದಲ್ಲಿ ಗರುಡ, ಗಂಧರ್ವಸ್ತ್ರೀಯರು ಮೊದಲು ಶಿವನಿಗೆ ಸ್ನಾನಮಾಡಿಸಿದರು. ಅನಂತರ ಕ್ರಮವಾಗಿ ಯಕ್ಷಸ್ತ್ರೀಯರೂ, ಸಪ್ತಮಾತೃಕೆಯರೂ, ಲಕ್ಷ್ಮಿ, ಸರಸ್ವತಿ, ಶಚೀ ಮೊದಲಾದ ದೇವತಾ ಸ್ತ್ರೀಯರೂ, ಶಿವನಿಗೆ ಮಂಗಳಾಭಿಷೇಕ ಮಾಡಿದರು. ಹರಿಚಂದನಾದಿಗಳನ್ನು ಪೂಸಿ, ಶಿವನನ್ನು ಮದುಮಗನನ್ನಾಗಿ ಅಲಂಕರಿಸಿದರು. ಗೌತಮ, ಅತ್ರಿ, ಭೃಗು ಮೊದಲಾದ ಮಹರ್ಷಿಗಳು ಶಿವನ ಬಲಗೈಗೆ ಶಾಸ್ತ್ರೋಕ್ತವಾಗಿ ದೀಕ್ಷಾಬಂಧವನ್ನು ಕಟ್ಟಿ, ನವಗ್ರಹ ಪೂಜೆಗಳನ್ನು ಮಾಡಿಸಿದರು. ಬ್ರಾಹ್ಮಣರಿಗೆ ದಾನಗಳನ್ನು ಕೊಡಿಸಿದರು.

ತರುವಾಯ ಬ್ರಹ್ಮನ ಆದೇಶದಂತೆ ಶಿವನು ತನ್ನ ಕಡೆಯವರನ್ನೆಲ್ಲಾ ಕಲೆತುಕೊಂಡು, ಮಂಗಳ ವಾದ್ಯಗಳು ಮೊಳಗುತ್ತಿರಲು, ನೃತ್ಯಗೀತಗಳು ನಡೆ

ವಂತನ ಕುಮಾರಿ ಪಾರ್ವತಿಯೊಂದಿಗೆ ವಿವಾಹವಾಗುತ್ತದೆ. ವ್ಯವಧಿ ಸ್ವಲ್ಪ ಮಾತ್ರವೇ ಇದೆ. ನೀನು ಕಾಮಗಮನ ಉಳ್ಳವನಾದುದರಿಂದ, ಮೂರು ಲೋಕಗಳಲ್ಲಿರುವವರನ್ನೆಲ್ಲಾ ಈ ವಿವಾಹಕ್ಕೆ ಆಹ್ವಾನಿಸುವ ಕೆಲಸವನ್ನು ನಿನಗೆ ಕೊಡುತ್ತೇನೆ. ಕುಬೇರನೇ ಮೊದಲಾದವರೊಂದಿಗೆ ಮದುವೆಗೆ ಏನೇನು ಸಾಮಗ್ರಿಗಳು ಬೇಕೋ ಅವನ್ನೆಲ್ಲಾ ತರಲಿಕ್ಕೆ ಅವರವರಿಗೆ ಹೇಳಿಬಿಡು. ನಾನು ಕೇವಲ ಬೋಲಾಶಂಕರನಾದುದರಿಂದ, ಎಲ್ಲರೂ ಸೇರಿಯೇ ನನಗೆ ಮದುವೆ ಮಾಡಿಸಬೇಕಾಗಿದೆ" ಎಂದು ಹೇಳಿದನು.

ನಾರದನು ಸಂತೋಷದಿಂದ ಒಪ್ಪಿಕೊಂಡು ಶಿವನ ಅಪ್ಪಣೆ ಪಡೆದು ಹೊರಟನು. ಬ್ರಹ್ಮ, ವಿಷ್ಣು ದೇವೇಂದ್ರಾದಿಗಳೊಂದಿಗೂ, ಭೂಲೋಕ ನಾಗ ಲೋಕಗಳಲ್ಲಿರುವವರೊಂದಿಗೂ "ಮಾಘ ಶುದ್ಧ ಏಕಾದಶಿಯ ದಿನ ಬೆಳಂಜಾಮದ ಶುಭಮುಹೂರ್ತ



ಯುತ್ತಿರಲು ಓಷಧೀಪುರಕ್ಕೆ ದಿಬ್ಬಣ ಹೊರಟಿತು. ಕೈಲಾಸದ ರಕ್ಷಣೆಗಾಗಿ ರುದ್ರಗಣನಾಯಕರುಗಳನ್ನಿರಿಸಿ, ಉಳಿದ ಪ್ರಮಥಗಣಗಳನ್ನೆಲ್ಲಾ ಹೊರಡಿಸಿಕೊಂಡು ನಂದೀಶ್ವರನು ದಿಬ್ಬಣದೊಂದಿಗಿದ್ದನು. ವೀರಭದ್ರನೂ, ಚಂಡೀಶ್ವರನೂ, ಭೈರವನೂ ತಮ್ಮ ತಮ್ಮ ವಾಹನಗಳ ಮೇಲೆ ಹೊರಟರು.

ಮದುಮಗನಾದ ಶಿವನನ್ನು ಅಲಂಕರಿಸಲ್ಪಟ್ಟ ಐರಾವತದ ಮೇಲೆ ಕೂಡಿಸಿದ್ದರು. ಬ್ರಹ್ಮನು ಸರಸ್ವತಿಯೊಂದಿಗೆ ಹಂಸದ ಮೇಲೆ ಹೊರಟಿದ್ದನು. ಗರುಡನ ಮೇಲೆ ವಿಷ್ಣುವೂ, ಲಕ್ಷ್ಮಿಯೂ ಅಲಂಕೃತರಾಗಿದ್ದರು. ಶಚಿಯೂ ಇಂದ್ರನೂ ಕದಲುವ ರೆಕ್ಕೆಯ ಸಿಂಹಾಸನದ ಮೇಲೆ ಏರಿಕೊಂಡಿದ್ದರು. ಕುಬೇರನು ನವನಿಧಿಗಳೊಂದಿಗೆ ಶಿವನ ಹಿಂದೆಯೇ ಕುಳಿತಿದ್ದನು. ದೇವತಾ ಸ್ತ್ರೀಯರೂ, ಋಷಿಪತ್ನಿಯರೂ ದಿವ್ಯ ವಸ್ತ್ರಗಳನ್ನೂ, ಸುಗಂಧ ದ್ರವ್ಯಗಳನ್ನೂ ತೆಗೆದುಕೊಂಡಿದ್ದರು. ಅವರೆಲ್ಲಾ ಪ್ರತ್ಯೇಕ ವಿಮಾನದ ಮೇಲೆ ಸಾಗುತ್ತಿದ್ದರು.

ಹೀಗೆ ಪರಮ ವೈಭವದಿಂದ ಗಂಡಿನ ದಿಬ್ಬಣವು ನಗರವನ್ನು ಸಮೀಪಿಸುತ್ತಿರಲು, ಹಿಮವಂತನು ತನ್ನ ಪುರೋಹಿತನಾದ ಗರ್ಗ ಮಹಾ ಮುನಿಯನ್ನೂ, ಮೇನಕೆಯನ್ನೂ, ಕುಮಾರರನ್ನೂ ಕರೆದುಕೊಂಡು ಮೇಳತಾಳಗಳಿಂದ ಇದಿರಾಗಿ ಬಂದು, ಬ್ರಹ್ಮ, ವಿಷ್ಣು, ದೇವೇಂದ್ರಾದಿಗಳಿಗೂ ಋಷಿಗಳಿಗೂ ನಮಸ್ಕಾರ ಮಾಡಿ, ಶಿವನ ಮುಂದೆ ಕೈ ಮುಗಿದು ನಿಂತುಕೊಂಡು, "ಸರ್ವೇಶ್ವರನಾದ ನಿನ್ನ ಅನುಗ್ರಹದಿಂದಾಗಿ ನಾನು ದೊಡ್ಡವನಾದೆನು. ಮದುಮಗನಾಗಿ ನನ್ನ ಮನೆಗೆ ಬಂದಿರುವ ನಿನಗೆ ಸುಸ್ವಾಗತ. ನಿನಗೆ ನನ್ನ ಕುಮಾರಿಯನ್ನು ಧಾರೆ ಎರೆದು ಕೊಡುತ್ತೇನೆ. ನೀನು ಅವಳನ್ನು ವಿವಾಹ ಮಾಡಿಕೊಂಡು ನನ್ನ ವಂಶವು ಪವಿತ್ರವಾಗುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಅವನು ಶಿವನನ್ನು ಕೈ ಹಿಡಿದು ಕರೆದು ತಂದು, ಪಟ್ಟೆ ವಸ್ತ್ರಗಳನ್ನೂ, ಗಂಧಪುಷ್ಪ ತಾಂಬೂಲಗಳನ್ನೂ ಕೊಟ್ಟು, ಉಳಿದೆಲ್ಲರಿಗೂ ಹಾಲು ಮತ್ತು ಸವಿಯಾದ ಪಾನೀಯಗಳನ್ನು ಕೊಡಿಸಿದನು. ಶ್ರಮ ನಿವಾರಣೆಗಾಗಿ ಎಲ್ಲರಿಗೂ ಸೊಗಸಾಗಿ ಚಾಮರ ಸೇವೆ ಮಾಡಿಸಿದನು.

ಹಿಮವಂತನ ಪಕ್ಷದ ಸ್ತ್ರೀಯರು ಶಿವನನ್ನು ನೋಡಿ, "ನಮ್ಮ ಪಾರ್ವತಿ ಅದೃಷ್ಟವಂತೆಯೇ ಸರಿ. ಕೋಟಿ ಮನ್ಮಥರಿಗೆ ಸಮಾನನಾದ ಗಂಡನು ಅವಳಿಗೆ ಲಭಿಸಿದನು. ಅವಳ ಪುಣ್ಯ ಎಷ್ಟು ದೊಡ್ಡದೋ!" ಎಂದುಕೊಂಡರು. ಮೇನಕೆ ಶಿವನ ಮುಂದೆ ಕೈಗಳನ್ನು ಮುಗಿದು, "ಸದಾಶಿವಾ, ಯಾರೋ ಅಜ್ಞಾನಿಗಳು ಹೇಳಿದ ಮಾತುಗಳನ್ನು ಕೇಳಿ, ನಿನ್ನ ಮೇಲೆ ಸಂದೇಹ ತಾಳಿದ್ದುಂಟು, ನಿಂದಿಸಿದ್ದುಂಟು. ನಮ್ಮ ತಪ್ಪುಗಳನ್ನು ಮನ್ನಿಸಿ ನಮ್ಮ ಮನೆಗೆ ಬಂದು, ನಾವು ಮಾಡುವ ವರಪೂಜೆಗಳನ್ನು



ಸ್ವೀಕರಿಸಿ, ನಮ್ಮ ಪಾರ್ವತಿಯನ್ನು ವಿವಾಹ ಮಾಡಿಕೊಳ್ಳಬೇಕು" ಎಂದು ಪ್ರಾರ್ಥಿಸಿದಳು. ದೊಡ್ಡ ಮುತ್ತೈದೆಯರು ಬಂದು ಪದ್ಧತಿಯಂತೆ ಶಿವನನ್ನು ಹರಸಿದರು.

ದಾರಿಯುದ್ದಕ್ಕೂ ಪುಷ್ಪಗಳು ಚೆಲ್ಲಲ್ಪಟ್ಟವು. ಮುತ್ತುಗಳನ್ನೂ, ಅಕ್ಷತೆಗಳನ್ನೂ ಚೆಲ್ಲಿದರು. ಹೀಗೆ ಶಿವನನ್ನು ಕರೆದುಕೊಂಡು ಮೇನಕಾ ಹಿಮವಂತರು ಮಂಟಪಕ್ಕೆ ಪ್ರವೇಶ ಮಾಡಿಸಿ, ವರಪೂಜೆ ಮಾಡಿದರು. ಮದುಮಗನೊಂದಿಗೆ ಬಂದ ಮಹಾ ಪರಿವಾರದವರಿಗೆ ಯಾವ ಕೊರತೆಯೂ ಬಾರದಂತೆ ಉಳಿದವರು ನೋಡಿಕೊಳ್ಳುತ್ತಿದ್ದರು.

ಕುಲಾಚಾರದಂತೆ ಪಾರ್ವತಿ ಅಂಬಿಕಾಲಯಕ್ಕೆ ಹೋಗಿ ಆ ದೇವಿಯನ್ನು ಪೂಜಿಸಿದಳು. ಅಮೇಲೆ ಮುತ್ತೈದೆಗಳಿಗೆಲ್ಲ ಬಟ್ಟೆ ಬಾಗಿನಗಳನ್ನು ಕೊಟ್ಟಳು. ಬಳಿಕ ಅವಳ ಹಿಂದೆ ಮುತ್ತೈದೆಗಳ ಪರಿವಾರವಿರಲು, ಪಾರ್ವತಿ ಪಲ್ಲಕಿಯನ್ನೇರಿದಳು. ಆಗ ದೇವತೆಗಳು ಅವಳನ್ನು ನೋಡಿ, "ಇವಳು ಪರದೇವತೆಯೇ ನಿಜ. ಇವಳ ಈ ದಿವ್ಯವಿವಾಹದಿಂದ ನಮ್ಮ ಕಷ್ಟಗಳೆಲ್ಲಾ ತೀರಿ ಹೋಗುತ್ತವೆ" ಎಂದುಕೊಂಡರು.

ಮುಹೂರ್ತದ ವೇಳೆ ಸಮೀಪಿಸುತ್ತಿರುವಾಗ ಪಾರ್ವತಿ ಅಂಬಿಕೆಯ ಪೂಜೆ ಮುಗಿಸಿ ಕಲ್ಯಾಣ ಮಂಟಪವನ್ನು ಸಮೀಪಿಸುತ್ತಿರಲು, ಶಿವನನ್ನು ಐರಾವತದ ಮೇಲೆ ಕೂಡಿಸಿ ಅಲ್ಲಿಗೆ ಕರೆದುಕೊಂಡು ಬಂದರು. ಮೊದಲು ಶಿವನನ್ನು ಕಲ್ಯಾಣ ಮಂಟಪದೊಳಗಿನ ಪೀಠದಲ್ಲಿ ಪುರೋಹಿತರು ಕೂಡಿಸಿದರು. ಮೇನಕಾ ಹಿಮವಂತರು ಅಳಿಯನ ಕಾಲುತೊಳೆದು, ಆ ನೀರನ್ನು ತಮ್ಮ ತಲೆಗೆ ತಳಿದುಕೊಂಡರು. ಆಮೇಲೆ ಉಭಯ ಪಕ್ಷಗಳ ಪುರೋಹಿತರುಗಳು ಮೇನಕಾ ಹಿಮವಂತರಿಂದ ಕನ್ಯಾದಾನ ಮಾಡಿಸಿದರು. ಶಿವಪಾರ್ವತಿಯರು ಪರಸ್ಪರ ಮಾಲೆ ಹಾಕಿಕೊಂಡರು. ಶಿವನ ಕೈಯಲ್ಲಿ ಪಾರ್ವತಿಯ ಕೈ ಸೇರಿ ಪಾಣಿಗ್ರಹಣವಾಯಿತು.

ಹೀಗೆ ಶಿವಪಾರ್ವತಿಯರ ವಿವಾಹವು ಅತ್ಯಂತ ವೈಭವದಿಂದ ನೆರವೇರಿತು. ಊಟ ಉಪಾಚಾರಗಳೆಲ್ಲಾ ಆದ ಮೇಲೆ ದೇವತೆಗಳು ಶಿವನ ಅನುಮತಿ ಪಡೆದು ತಮ್ಮ ತಮ್ಮ ನಿವಾಸಗಳಿಗೆ ಹೊರಟು ಹೋದರು. ಶಿವನು ಅನೇಕ ದಿನಗಳ ವರೆಗೆ ಹಿಮವಂತನ ಮನೆಯಲ್ಲೇ ಇರಬೇಕಾಯಿತು. ಹಿಮವಂತನ ಕಡೆಯವರು ಮಾಡುವ ಔತಣಗಳನ್ನು ಸ್ವೀಕರಿಸದೆ ಕೈಲಾಸಕ್ಕೆ ಹೋಗಲಾಗಲಿಲ್ಲ. ಆಮೇಲೆ ಶಿವನು ತಾನು ಪಾರ್ವತಿಯೊಂದಿಗೆ ಕೈಲಾಸಕ್ಕೆ ಹೊರಡುವೆನೆಂದು ನಂದೀಶ್ವರನ ಮೂಲಕ ಹಿಮವಂತನಿಗೆ ಹೇಳಿ ಕಳುಹಿಸಿದನು.

ಮೇನಕಾ ಹಿಮವಂತರು ಪಾರ್ವತಿಯನ್ನು ಶಿವನೊಂದಿಗೆ ಕಳುಹಿಸಲು ಸನ್ನಾಹ ಮಾಡತೊಡಗಿದರು. ಅವಳಿಗೆ ವಸ್ತ್ರಗಳನ್ನೂ, ಪರಿಚಾರಿಕೆಯರನ್ನೂ, ಗೃಹೋಪಕರಣಗಳನ್ನೂ, ಅವಳ ವಾಹನ

ವಾಗಿದ್ದ ಸಿಂಹವನ್ನೂ ಬಳವಳಿಯಾಗಿ ಶಿವನಿಗೆ ಸಮರ್ಪಿಸಿ, "ಪರಮೇಶ್ವರಾ, ಪಾರ್ವತಿಯನ್ನು ಪ್ರೇಮದಿಂದ ನೋಡಿಕೋ!" ಎಂದು ಕೇಳಿಕೊಂಡರು. ಹಿರಿಯ ಮುತ್ತೈದೆಯರು ಪಾರ್ವತಿಗೆ ಹೇಳಬೇಕಾದ ನೀತಿಗಳನ್ನು ಹೇಳಿದರು.

ಪಾರ್ವತೀ ಪರಮೇಶ್ವರರ ಪ್ರಯಾಣಕ್ಕೆ ಶುಭ ಮುಹೂರ್ತವಿಟ್ಟಿದ್ದರು. ಆ ದಿನ ಶಿವನು ಪಾರ್ವತಿಯೊಂದಿಗೆ ಕೈಲಾಸಕ್ಕೆ ಬಂದು, ಮಹರ್ಷಿಗಳ ಸಹಾಯದಿಂದ ಪಾರ್ವತಿಯೊಂದಿಗೆ ಗೃಹಪ್ರವೇಶ ಮಾಡಿದನು. ಆಮೇಲೆ ಮೂರು ದಿನಗಳ ವರೆಗೂ ಶಿವನ ಮನೆಯಲ್ಲಿ ಔತಣಗಳು ನಡೆದುವು. ಅದುವರೆಗೂ ಶಿವನೊಂದಿಗಿದ್ದ ಬ್ರಹ್ಮ, ವಿಷ್ಣು, ಕುಬೇರ ಮೊದಲಾದ ನಿಕಟವರ್ತಿಗಳು ಹೊರಟು ಹೋಗಲು ಶಿವನ ಅನುಜ್ಞೆ ಕೇಳಿದರು. ತನ್ನ ಆಹ್ವಾನದಂತೆ ಬಂದ ಅವರಿಗೆಲ್ಲಾ ಶಿವನು ತಕ್ಕ ಕಾಣಿಕೆಗಳನ್ನು ಕೊಟ್ಟು, ಗೌರವಿಸಿ ಕಳುಹಿಸಿ ಕೊಟ್ಟನು.

ಪಾರ್ವತಿಯ ಕಲ್ಯಾಣಕ್ಕೆ ಬಂದ ಅತಿಥಿಗಳೆಲ್ಲಾ ಹೊರಟು ಹೋದ ಮೇಲೆ, ಶಿವನು ನಂದೀಶ್ವರನನ್ನು ಬಳಿಗೆ ಕರೆದು, "ನಾನೂ ಪಾರ್ವತಿಯೂ ವಿಶ್ರಾಮ ಮಂದಿರದಲ್ಲಿ ಬಳಲಿಕೆ ತೀರಿಸಿಕೊಳ್ಳುತ್ತೇವೆ. ಆ ಮಂದಿರವನ್ನು ಬಹಳ ಚೆನ್ನಾಗಿ ಅಲಂಕರಿಸಿಡು" ಎಂದನು.

ನಂದೀಶ್ವರನು ತನ್ನ ಸಹಾಯಕ್ಕೆ ಗಣಾಧಿಪತಿಗಳನ್ನು ಇಟ್ಟುಕೊಂಡು ಮಹಾ ಸೌಧವನ್ನು ಪ್ರವೇಶಿಸಿದನು. ಇಡೀ ಸೌಧವನ್ನು ಶುಭ್ರಗೊಳಿಸಿ ಪನ್ನೀರಿನಿಂದ ತೊಳೆದನು. ಜವ್ವಾದು ಮೊದಲಾದ ಪರಿಮಳ ವಸ್ತುಗಳಿಂದ, ಮುತ್ತುಗಳ ಮಾಲೆಗಳಿಂದ, ಪದ್ಮಗಳ ರಂಗವಲ್ಲಿಗಳಿಂದ ಅಲಂಕರಿಸಿದನು. ಹವಳಗಳ ಮಂಚದ ಮೇಲೆ ಹಂಸತೂಲಿಕಾ ತಲ್ಪಗಳನ್ನು ಹಾಸಿದನು. ಗೋಡೆಗಳಿಗೆ ಸುಂದರವಾದ ಚಿತ್ರ ವಿಚಿತ್ರ ಪಟಗಳನ್ನು ತಗಲಿಸಿದನು. ಪಾನೀಯಗಳನ್ನೂ ಬಗೆಬಗೆಯ ಭಕ್ಷ್ಯಗಳನ್ನೂ, ಹಣ್ಣುಗಳನ್ನೂ ಹೂವುಗಳನ್ನೂ ಇರಿಸಬೇಕಾದಲ್ಲಿ ಇರಿಸಿದನು. ಶಿವ ಪಾರ್ವತಿಯರ ಶಯ್ಯಾಗೃಹವು ಅತ್ಯಂತ ಸುಂದರವಾಯಿತು.

ಆಮೇಲೆ ಶಿವನು ನಂದೀಶ್ವರನೇ ಮೊದಲಾದವರೊಂದಿಗೆ, "ನಾವು ಒಳಗೆ ಹೋಗುತ್ತೇವೆ. ನಮ್ಮ ಶಯ್ಯಾ ಮಂದಿರದೊಳಗೆ ಯಾರನ್ನೂ ಬಿಡಬಾರದು. ಭವನದ ಸುತ್ತಲೂ ಕಾವಲು ಕಾಯುತ್ತಿರಬೇಕು" ಎಂದು ಹೇಳಿ ಪಾರ್ವತಿಯ ಕೈಗಳನ್ನು ಹಿಡಿದುಕೊಂಡು ಸೌಧದೊಳಗೆ ಪ್ರವೇಶ ಮಾಡಿದನು. ಶಿವ ಪಾರ್ವತಿಯರು ದಾಂಪತ್ಯ ಸುಖದಲ್ಲಿ ತೇಲಾಡತೊಡಗಿದರು. ಶಿವಗಣಾದಿಗಳು ಕಟ್ಟೆಚ್ಚರದಿಂದ ಶಿವಮಂದಿರವನ್ನು ಕಾವಲು ಕಾಯುತ್ತಿದ್ದರು.



# ಪ್ರಜಾಪ್ರತಿನಿಧಿ

ನಾಗರಹಳ್ಳಿಯಲ್ಲಿ ವಾಮನಮೂರ್ತಿ ಎಂಬವನೊಬ್ಬನಿದ್ದನು. ಅವನು ಪ್ರತಿ ಸಣ್ಣ ತಗಾದೆಗಳಿಗೂ, "ಇದು ಇಲ್ಲಿ ಮುಗಿಯುವಂಥಾದ್ದಲ್ಲ. ಹೆದರಬೇಡಿ, ನಾನಿದ್ದೇನೆ. ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಿ!" ಎಂದು ಜನರಿಗೆ ಪ್ರೋತ್ಸಾಹಿಸಿ, ಅವರನ್ನು ನ್ಯಾಯಾಸ್ಥಾನಕ್ಕೆ ಪ್ರದಕ್ಷಿಣೆ ಬರಿಸುತ್ತಿದ್ದನು.

ಒಂದುಸಾರಿ ಗ್ರಾಮಸ್ಥರಿಗೆ ತಮ್ಮ ಪ್ರತಿನಿಧಿಯಾಗಿ ಒಬ್ಬನನ್ನು ರಾಜಧಾನಿಗೆ ಕಳುಹಿಸಬೇಕಾಯಿತು. ಯಾರನ್ನು ಆರಿಸಿ ಕಳುಹಿಸುವುದೆಂಬ ವಿಷಯದಲ್ಲಿ ಗ್ರಾಮಸ್ಥರಲ್ಲಿ ಏಕಾಭಿಪ್ರಾಯ ಬರಲಿಲ್ಲ. ಕಡೆಗೆ ಆ ಬಾಧ್ಯತೆಯನ್ನು ಗ್ರಾಮದ ಹಿರಿಯನಿಗೇ ಒಪ್ಪಿಸಿದರು.

ಆ ಹಿರಿಯನು ನಾಲ್ಕೈದು ದಿನಗಳವರೆಗೆ ರಾತ್ರಿಯಲ್ಲಿ ಮಾರುವೇಷದಲ್ಲಿ ಗ್ರಾಮದೊಳಗೆಲ್ಲಾ ತಿರುಗಾಡಿ, ವಾಮನಮೂರ್ತಿಯನ್ನು ಕಳುಹಿಸುವಂತೆ ಗ್ರಾಮಸ್ಥರಿಗೆ ಸಲಹೆ ಮಾಡಿದನು.

"ಆ ದಾವೆಯ ವಾಮನಮೂರ್ತಿಯನ್ನೇ? ಅವನೋ ರಾಜಧಾನಿಯಲ್ಲಿ ನಮ್ಮ ಪ್ರತಿನಿಧಿ?" ಎಂದು ಗ್ರಾಮಸ್ಥರು ಆಶ್ಚರ್ಯಪಟ್ಟರು.

ಆಗ ಗ್ರಾಮದ ಹಿರಿಯನು ಅವರೊಂದಿಗೆ, "ನಮ್ಮ ಗ್ರಾಮದಲ್ಲಿ ಎಲ್ಲಾ ತಕರಾರುಗಳಿಗೂ ವಾಮನಮೂರ್ತಿಯೇ ಕಾರಣವೆಂಬ ಅನುಮಾನ ನನಗಿತ್ತು. ಈ ನಡುವೆ ನಾನು ರಾತ್ರಿಯಲ್ಲಿ ಗ್ರಾಮವೆಲ್ಲಾ ತಿರುಗಾಡಿದ ಮೇಲೆ ಅದು ನಿಜವೆಂದು ಧೃಢಪಟ್ಟಿತು. ಆದುದರಿಂದ ವಾಮನಮೂರ್ತಿ ರಾಜಧಾನಿಗೆ ಹೋಗಿಬಿಟ್ಟರೆ, ಗ್ರಾಮವು ಪ್ರಶಾಂತವಾಗಿರುತ್ತದೆ. ಪ್ರಜಾಪ್ರತಿನಿಧಿಯಾದವನು ರಾಜಧಾನಿಯಲ್ಲೇ ಇರಬೇಕಾಗುತ್ತದೆಯಷ್ಟೆ?" ಎಂದನು.

ಅದನ್ನು ಕೇಳಿ ಗ್ರಾಮಸ್ಥರು ಒಮ್ಮನಸ್ಸಿನಿಂದ ವಾಮನಮೂರ್ತಿಯನ್ನು ತಮ್ಮ ಪ್ರತಿನಿಧಿಯಾಗಿ ಆರಿಸಿ, ಗಂಟು ಮೂಟೆಗಳೊಂದಿಗೆ ಅವನನ್ನು ರಾಜಧಾನಿಗೆ ಕಳುಹಿಸಿದರು.





# ಸುಲ್ತಾನನ ದುಃಖ

ಹಿಂದೆ ಇರಾಕ್ ದೇಶದೊಳಗಿನ ಕೆರವಾನ್ ಎಂಬ ರಾಜ್ಯಕ್ಕೆ ಯುವಕನೊಬ್ಬನು ಸುಲ್ತಾನನಾದನು. ಅವನಿಗೆ ತನ್ನ ಬುದ್ಧಿವಂತಿಕೆಯಲ್ಲಿ ಬಹಳ ಹೆಮ್ಮೆ ಇತ್ತು. ಅವನು ಯಾವಾಗಲೂ ತನ್ನ ಹೆಚ್ಚುಳಿಕೆಯನ್ನು ತನ್ನವರೊಂದಿಗೆ ತಾನೇ ಹೇಳಿಕೊಂಡು ಸಂತೋಷಪಡುತ್ತಿದ್ದನು.

"ನಾನು ಯಾವ ಕೆಲಸವನ್ನು ಮಾಡಿದರೂ ಚೆನ್ನಾಗಿ ಆಲೋಚಿಸಿಯೇ ಮಾಡುತ್ತೇನೆ. ಆದರಿಂದ ಪರಿಣಾಮವು ಒಳ್ಳೇದೇ ಆಗುತ್ತದೆ" ಎಂದು ಆಗಾಗ ಹೇಳುತ್ತಾನೆ.

ಅವನ ಸುತ್ತಲಿರುವ ಪರಿವಾರದವರೆಲ್ಲಾ ಅವನ ಮೆಚ್ಚುಗೆ ಪಡೆಯಲಿಕ್ಕಾಗಿ "ಹೌದು ಪ್ರಭೂ, ನಿಮ್ಮ ಬುದ್ಧಿಶಕ್ತಿ ಅಪಾರವೇ ಸರಿ. ಈ ದೇಶಕ್ಕೆ ನಿಮ್ಮಂಥ ಸುಲ್ತಾನರು ಈವರೆಗೆ ಆದದ್ದಿಲ್ಲ. ನಿಮ್ಮ ಕೈಕೆಳಗಿನವರಾಗಿರುವುದು ನಮ್ಮ ಒಳ್ಳೆಯ ಅದೃಷ್ಟ" ಎಂದು ಹೊಗಳಿ ಹೇಳುತ್ತಿದ್ದರು.

ಆದರೂ ಸುಲ್ತಾನನ ಆಸ್ತಾನದಲ್ಲಿರುವ ವೃದ್ಧ ಮಂತ್ರಿ ಮಾತ್ರ, ಸಂದರ್ಭ ಬಂದಾಗಲೆಲ್ಲಾ "ಪ್ರಭುವೇ, ಯಾವ ಕೆಲಸವನ್ನು ಕೂಡಾ ಹಿಂದೆ ಮುಂದೆ ನೋಡದೆ ಮಾಡಿಬಿಡಬಾರದು. ದುಡುಕದೆ ನಿಧಾನವಾಗಿ ಆಲೋಚಿಸಿ ಮಾಡಬೇಕು" ಎಂದು ಹೇಳುವನು.

ವೃದ್ಧ ಮಂತ್ರಿ ಪಲ್ಲವಿ ಹಾಡಿದಂತೆ ಹಾಗೇಕೆ ಹೇಳುವನೋ ಎಂದು ಸುಲ್ತಾನನಿಗೆ ಗೊತ್ತಾಗಲಿಲ್ಲ.

ಸುಲ್ತಾನನು ಒಂದು ಹದ್ದನ್ನು ಬಹಳ ಪ್ರೀತಿಯಿಂದ ಸಾಕುತ್ತಿದ್ದನು. ಅದು ಬಹಳ ಸೂಕ್ಷ್ಮ ಬುದ್ಧಿಯುಳ್ಳ ಹದ್ದು. ಆ ಹದ್ದು ಯಾವಾಗಲೂ ಸುಲ್ತಾನನ ಬೆನ್ನ ಹಿಂದೆಯೇ ಇರುತ್ತಿತ್ತು, ಮುಖ್ಯವಾಗಿ ಸುಲ್ತಾನನು ಬೇಟೆಗೆ ಹೋಗುವಾಗ, ಅವನೊಂದಿಗೆ ಅದೂ ಆಕಾಶದಲ್ಲಿ ಹಾರುತ್ತ ಸುತ್ತುಮುತ್ತಲೂ ಪರಿಶೀಲಿಸಿ ನೋಡಿ, ಯಾವ ಭಾಗದಲ್ಲಿ ಮೃಗಗಳಿವೆ ಎಂಬುದನ್ನು ತಿಳಿಯಪಡಿಸುತ್ತಿತ್ತು. ಸಮೀಪದಲ್ಲಿ ಏನಾದರೂ ಅಪಾಯವಿದ್ದರೆ ಅವನನ್ನು ಎಚ್ಚರಿಸುತ್ತಿತ್ತು.

ಒಂದು ದಿನ ಸುಲ್ತಾನನು ತನ್ನ ಪರಿವಾರದೊಂದಿಗೆ ಬೇಟೆಯಾಡಲು ಕಾಡಿನ ಕಡೆಗೆ ಹೋದನು. ಅಲ್ಲಿ ಸುಂದರವಾದೊಂದು ಜಿಂಕೆ ಅವರ ಕಣ್ಣಿಗೆ ಬಿತ್ತು. ಎಲ್ಲರೂ ಅತ್ಯಂತ ಉತ್ಸಾಹ



ದಿಂದ ಆ ಜಿಂಕೆಯನ್ನು ನಾಲ್ಕು ಸುತ್ತಲೂ ಮುತ್ತಿಕೊಂಡು ಹೋದರು.

"ಈ ಜಿಂಕೆಯನ್ನು ತಪ್ಪದೆ ಹಿಡಿಯಲೇ ಬೇಕು. ಒಂದು ವೇಳೆ ಅದು ಯಾವ ದಿಕ್ಕಿನಿಂದಾದರೂ ತಪ್ಪಿಸಿಕೊಂಡುಬಿಟ್ಟರೆ ಅವರ ಪ್ರಾಣ ಉಳಿಯಲಾರದು ! ಜಾಗ್ರತೆ !" ಎಂದು ಸುಲ್ತಾನ್ ಕೂಗಿ ತನ್ನ ಪರಿವಾರದವರಿಗೆ ಎಚ್ಚರಿಕೆ ಕೊಟ್ಟನು.

ನಡುವಿನಲ್ಲಿ ಸಿಕ್ಕಿಕೊಂಡ ಜಿಂಕೆ ಮುಂಗಾಲಿನ ಮೇಲೆ ಬಾಗಿ, ಸ್ವಲ್ಪಹೊತ್ತು ಹಾಗೆಯೇ ನೋಡುತ್ತ ನಿಂತು, ಇದ್ದಕ್ಕಿದ್ದ ಹಾಗೆ ಚಂಗನೆ ಎಗರಿ ಸುಲ್ತಾನನ ತಲೆಯ ಮೇಲಿಂದಾಗಿ ಆಚೆಗೆ ಹಾರಿ ಕ್ಷಣಮಾತ್ರದಲ್ಲಿ ಕಾಡಿನೊಳಗೆ ಓಡಿಹೋಯಿತು.

ಸುಲ್ತಾನ್ ಕಟಕಟನೆ ಹಲ್ಲು ಕಡಿಯುತ್ತ ಅತ್ಯಾವೇಶದಿಂದ "ಆ ಜಿಂಕೆಯನ್ನು ಕೊಲ್ಲದೆ ಬಿಡಲಾರೆ !" ಎನ್ನುತ್ತ ಕುದುರೆಯನ್ನು ಆ ಕಡೆಗೆ ತಿರುಗಿಸಿ ಅದರ ಹಿಂದೆ ಓಡಿಸಿದನು. ಕುದುರೆ ಅತ್ಯಂತ ವೇಗವಾಗಿ ಜಿಂಕೆಯ ಬೆನ್ನು ಹತ್ತಿ ಓಡಿತು.

ಆದರೆ ಅದು ಅರಣ್ಯ ಪ್ರಾಂತವಾದುದರಿಂದ ಪೊದರು ಮರಗಳ ಅಡೆತಡೆಗಳನ್ನು ಜಿಂಕೆ ಸುಲಭವಾಗಿ ದಾಟಿ ಹೋಗುವಂತೆ ಕುದುರೆಯಿಂದ ಓಡಲು ಸಾಧ್ಯವಾಗಲಿಲ್ಲ. ಜಿಂಕೆ ಕಣ್ಮರೆಯಾದರೂ ಸುಲ್ತಾನನ ಹದ್ದು ಆಕಾಶದಲ್ಲಿ ಹಾರುತ್ತಾ ಜಿಂಕೆ ಓಡುವ ದಿಕ್ಕನ್ನು ಸೂಚಿಸುತ್ತಿದ್ದುದರಿಂದ, ಸುಲ್ತಾನನು ಬಿಡದೆ ಕುದುರೆಯನ್ನು ಓಡಿಸುತ್ತಿದ್ದನು.

ಹೀಗಾಗಿ ಜಿಂಕೆ ಎತ್ತ ಓಡಿದರೂ ಸುಲ್ತಾನನ ದೃಷ್ಟಿಯಿಂದ ತಪ್ಪಲಾಗಲಿಲ್ಲ. ಹಾಗೆ ಬಹಳ ದೂರ ಓಡಿದ ಮೇಲೆ ಅಡವಿಯ ಕೊನೆಯ ಭಾಗವು ಬಂದಿತು. ಅಲ್ಲಿ ಚಿಕ್ಕ ಚಿಕ್ಕ ಮರಗಳು ಮಾತ್ರವೇ ಇದ್ದುವು. ಇದೇ ಸರಿಯಾದ ಸ್ಥಳವೆಂದುಕೊಂಡು ಸುಲ್ತಾನನು ಜಿಂಕೆಗೆ ಗುರಿ ನೋಡಿ ಬಾಣದಿಂದ ಹೊಡೆದನು. ಆ ಪೆಟ್ಟಿಗೆ ಜಿಂಕೆ ಹೊರಳಿಬಿದ್ದು ವಿಲವಿಲನೆ ಒದರುತ್ತಾ ಸ್ತಬ್ಧವಾಗಿ ಹೋಯಿತು. ಜಿಂಕೆಯನ್ನು ಬೀಳಿಸಿದೆನೆಂಬ ಸಂತೋಷದಲ್ಲಿ ಸುಲ್ತಾನನು ಸಮೀಪದಲ್ಲಿ ಒಂದು ಬಂಡೆಯ ಮೇಲೆ ಕುಳಿತನು. ಆ ಬಂಡೆಯ ಪಕ್ಕದಲ್ಲಿಯೇ ಕಲ್ಲುಗಳ ಗುಡ್ಡವೊಂದಿದ್ದಿತು. ಆ ಗುಡ್ಡದ ಮೇಲೆ ಹದ್ದು ಎರಗಿ ಕುಳಿತುಕೊಂಡಿತು.

ಬಹಳವಾಗಿ ದಣಿದುಹೋದ ಸುಲ್ತಾನನಿಗೆ, ಈಗ ವಿಪರೀತ ಬಾಯಾರಿಕೆಯಾಗತೊಡಗಿತು. ನೀರಿಗಾಗಿ ಸುತ್ತುಮುತ್ತಲೂ ನೋಡಿದನು. ಅವನ ಹತ್ತಿರ ಗಿಡದ ಕೊಂಬೆಯಲ್ಲಿ ದೊನ್ನೆಯ ಹಾಗಿರುವ ದೊಡ್ಡದೊಂದು ಎಲೆ ಇದ್ದಿತು. ಅದರೊಳಗೆ ಸ್ವಲ್ಪ ನೀರು ಕೂಡಾ ಇರುವುದು ಕಂಡಿತು. ಕಲ್ಲುಗಳ ಗುಡ್ಡದಲ್ಲಿದ್ದ ಒಂದು ಪೊದರಿನೊಳಗಿನಿಂದ ನೀರಿನ ಒಂದೊಂದೇ ಬೊಟ್ಟು ಆ ದೊನ್ನೆಗೆ ಬೀಳುತ್ತಿತ್ತು. ಚಮಚ ಮಾತ್ರದಷ್ಟು ನೀರಿನಿಂದ ಬಾಯಾರಿಕೆ ತೀರದೆ ಹೋದರೂ, ಗಂಟಲನ್ನಾದರೂ ನೆನೆಯಿಸ

ಬಹುದು ಎಂದುಕೊಂಡು ಸುಲ್ತಾನನು ಆ ಎಲೆಯನ್ನು ಜಾಗರೂಕತೆಯಿಂದ ಕೊಂಬೆಯಿಂದ ಚಿವುಟಿ ತೆಗೆದು ಮೆಲ್ಲನೆ ತನ್ನ ಬಾಯಿಯ ಹತ್ತಿರ ಒಯ್ದನು.

ಕೂಡಲೇ ಹದ್ದು ಮಿಂಚಿನ ವೇಗದಲ್ಲಿ ಬಂದು ಅವನ ಕೈಯಲ್ಲಿದ್ದ ಎಲೆಯನ್ನು ಕಾಲಿನಿಂದ ಒದ್ದು ದೂರ ಬೀಳಿಸಿ ಹಾಕಿ, ಯಥಾಪ್ರಕಾರ ಗುಡ್ಡದ ಮೇಲೆ ಹೋಗಿ ಕುಳಿತಿತು.

"ಛೀ! ನಿನ್ನ ಬಾಯಾರಿಕೆ ತೀರಿಸಿಕೊಳ್ಳಲು ಇದುವೋ ದಾರಿ!" ಎಂದು ಸುಲ್ತಾನನು ಹದ್ದನ್ನು ಬಯ್ದುಕೊಂಡು, ಕೊಂಬೆಯಿಂದ ಇನ್ನೊಂದು ಎಲೆಯನ್ನು ಮುರಿದು, ಮೇಲಿನಿಂದ ಬೀಳುವ ನೀರಿನ ಬೊಟ್ಟುಗಳನ್ನು ಅದರಲ್ಲಿ ಹಿಡಿಯತೊಡಗಿದನು. ಆದರೆ ಹದ್ದು ಮತ್ತೆ ವೇಗದಿಂದ ಹಾರಿ ಬಂದು ಅವನ ಕೈಯಲ್ಲಿದ್ದ ಎರಡನೇ ಎಲೆಯನ್ನು ಕೂಡಾ ದೂರ ಹಾರಿಸಿಬಿಟ್ಟಿತು.

ಸುಲ್ತಾನನು ಅತ್ಯಂತ ಕೋಪದಿಂದ ಹದ್ದನ್ನು ಹತ್ತಿರ ಬರುವಂತೆ ಕರೆದನು. ಅದು ಹತ್ತಿರ ಬಂದ ಮರುಕ್ಷಣದಲ್ಲಿ ಕತ್ತಿಯ ಒಂದೇಟಿಗೆ ಅದರ ತಲೆಯನ್ನು ಕಡಿದುಬಿಟ್ಟನು.

ಆಮೇಲೆ ಸುಲ್ತಾನ್ ನೀರಿನ ಬೊಟ್ಟು ಎಲ್ಲಿಂದ ಬೀಳುವುದೋ ತಿಳಿದು ದಾಹ ತೀರಿಸಿಕೊಳ್ಳಬಹುದೆಂಬ ಆಶೆಯಲ್ಲಿ ಬೇಗಬೇಗನೇ ಗುಡ್ಡದ ಮೇಲೆ ಹೋದನು. ಅಲ್ಲಿ ಪೊದರಿನಾಚೆಗೆ ದೊಡ್ಡದೊಂದು ಹಾವು ಮಲಗಿದ್ದಿತು. ಅದರ ಬಾಯಿಯಿಂದ ಸ್ರವಿಸುವ ವಿಷವೇ ಬೊಟ್ಟು ಬೊಟ್ಟಾಗಿ ಕೆಳಗೆ ಬೀಳುತ್ತಿದ್ದಿತು. ಅದನ್ನು ಕುಡಿದರೆ ಸಾವು ಬರುತ್ತದೆಂತಲೇ ಹದ್ದು ಹಾಗೆ ಮಾಡಿತೆಂದು ಈಗ ತಿಳಿಯಿತು ಸುಲ್ತಾನನಿಗೆ.

ಸುಲ್ತಾನನು ಬಹಳವಾಗಿ ದುಃಖಿಸಿದನು. ಅಲ್ಲಿಂದ ನೋಡುವಾಗ ಸಮೀಪದಲ್ಲಿ ಹರಿಯುವ ತೊರೆಯೊಂದು ಕಾಣಿಸಿದರೂ, ಬಾಯಾರಿಕೆಯ ನೆನಪೇ ಇಲ್ಲದೆ, ಸುಲ್ತಾನನು ಆ ಹದ್ದನ್ನು ಎತ್ತಿ ತನ್ನ ತೊಡೆಯ ಮೇಲೆ ಇಟ್ಟು ತಡವುತ್ತಾ ಮೂರ್ಛೆ ಹೋದನು.

ಬಹಳ ಹೊತ್ತಿನ ಮೇಲೆ ಅವನ ನೌಕರರು ಅಲ್ಲಿಗೆ ಬಂದು ನಡೆದ ಸಂಗತಿಯನ್ನು ತಿಳಿದುಕೊಂಡು, ಸುಲ್ತಾನನ ಬಾಯಾರಿಕೆ ತೀರಿಸಿ, ಎಬ್ಬಿಸಿದರು. ನಡೆದು ಹೋದುದಕ್ಕೆ ಚಿಂತಿಸಬಾರದೆಂದು ಸುಲ್ತಾನನಿಗೆ ಬಹಳವಾಗಿ ಸಮಾಧಾನ ಹೇಳಿದರು. ಆದರೂ ಅವನ ದುಃಖ ತೀರಲಿಲ್ಲ.

ಯಾವ ಕೆಲಸವನ್ನಾದರೂ ದುಡುಕಿ ಮಾಡಬಾರದೆಂದು ವೃದ್ಧ ಮಂತ್ರಿ ಆಗಾಗ ಏಕೆ ಎಚ್ಚರಿಸುತ್ತಿದ್ದನೆಂದು, ಸುಲ್ತಾನನಿಗೆ ಈಗ ಚೆನ್ನಾಗಿ ಅರ್ಥವಾಯಿತು.



# ಆಫ್ರಿಕದ ಆನೆಗಳು

ಕ್ರಿ. ಪೂ. ೨೧೮ನೇ ಸಂವತ್ಸರದಲ್ಲಿ ಉತ್ತರ ಆಫ್ರಿಕಾದಿಂದ ಹಾನಿಬಾಲ್ ಎಂಬ ಸೇನಾನಾಯಕನು ರೋಮನ್ನರ ಮೇಲೆ ದಂಡೆತ್ತಿದನು. ಆ ಯುದ್ಧದಲ್ಲಿ ಹಾನಿಬಾಲ್ ಪಕ್ಷದ ಆನೆಗಳು ಕೂಡಾ ಹೋರಾಡಿದುವು. ಆದರೂ ಆಗ ಆಲ್ಪ್ಸ್‌ದಿಂದ ಇಟಲೀಗೆ ಹೋಗುವ ಭಯಂಕರವಾದ ಮಾರ್ಗದ ಮಧ್ಯದಲ್ಲಿ ಕೆಲವು ಆನೆಗಳು ಸತ್ತವು. ಹಾನಿಬಾಲ್ ಯುದ್ಧಕ್ಕೆ ನಡೆಯಿಸಿದ ಆನೆಗಳಲ್ಲಿ ಹೆಚ್ಚಿನವು ಆಫ್ರಿಕಕ್ಕೆ ಸೇರಿದಂಥವು. ಉಳಿದವು ಭಾರತ ದೇಶಕ್ಕೆ ಸೇರಿದುವು.

ಒಂದು ಕಾಲಘಟ್ಟದಲ್ಲಿ ಪ್ರಪಂಚದೊಳಗಿನ ಹಲವು ಪ್ರಾಂತ್ಯಗಳಲ್ಲಿ ಆನೆಗಳು ಇದ್ದುವೆಂದು ಆಧಾರಗಳಿದ್ದರೂ, ಪ್ರಸ್ತುತ ಆಫ್ರಿಕ ಮತ್ತು ಭಾರತ ದೇಶಗಳಿಗೆ ಸೇರಿದ ಎರಡು ಬಗೆಯ ಆನೆಗಳು ಮಾತ್ರವೇ ಇವೆ.

ಆ ಎರಡು ಬಗೆಗಳಲ್ಲಿ ಆಫ್ರಿಕಕ್ಕೆ ಸೇರಿದ ಆನೆ ಆಕಾರದಲ್ಲಿ ಬಹು ದೊಡ್ಡದು. ಈ ಆನೆಗಳ ದೊಡ್ಡ ದೊಡ್ಡ ಕಿವಿಗಳು ಶರೀರದ ಉಷ್ಣವನ್ನು ಉಳಿದ ಅವಯವಗಳಿಗೆ ಪಸರಿಸುವಂತೆ ಮಾಡಲು, ಅಗತ್ಯ ಬಿದ್ದರೆ ಬೀಸಣಿಗೆಯ ಹಾಗೆ ಗಾಳಿ ಬೀಸಲೂ ಉಪಯೋಗವಾಗುತ್ತವೆ.

ಭಾರತ ದೇಶದೊಳಗಿನ ಆನೆಗಳು ಸಮೃದ್ಧವಾಗಿ ನೆರಳಿರುವ ದಟ್ಟವಾದ ಅರಣ್ಯಗಳಲ್ಲಿ ವಾಸಿಸುವುದರಿಂದ, ಇವುಗಳಿಗೆ ಅಷ್ಟು ದೊಡ್ಡ ಕಿವಿಗಳು ಅಗತ್ಯವಿಲ್ಲ.

ಆಫ್ರಿಕದ ಆನೆಗಳ ಕುಂಭಸ್ಥಳಗಳು ನಮ್ಮ ಆನೆಗಳ ಕುಂಭಸ್ಥಳಗಳಿಗಿಂತ ಸ್ವಲ್ಪ ಹೆಚ್ಚು ಹಳ್ಳವಾಗಿರುತ್ತವೆ. ಸೊಂಡಿಲಿನಲ್ಲಿ ಮಡಿಕೆಗಳು ಹೆಚ್ಚಾಗಿಯೂ ಕೊನೆಯಲ್ಲಿ ಎರಡು ತುಟಿಗಳೂ ಇರುತ್ತವೆ. ದಂತಗಳು ಬಹಳಷ್ಟು ಉದ್ದವಾಗಿರುತ್ತವೆ.

ಹೆಣ್ಣಾನೆಗಳೂ, ಮರಿಯಾನೆಗಳೂ ಕೂಡಿ ಕುಟುಂಬ ಜೀವನ ಸಾಗಿಸುತ್ತವೆ. ಹೀಗೆ ಕೆಲವು ಕುಟುಂಬಗಳು ಕೂಡಿ ಒಂದು ಗುಂಪಾಗಿ ಮಾಡಿಕೊಳ್ಳುತ್ತವೆ. ಅಗತ್ಯ ಬಿದ್ದಾಗ ಗಂಡಾನೆಗಳು ಬಂದು ತಮ್ಮದಾದ ಗುಂಪಿನಲ್ಲಿ ಸೇರುತ್ತವಾದರೂ ಯಾವಾಗಲೂ ಅವು ಬೇರೆಯಾಗಿಯೇ ಇರುತ್ತವೆ.

ಆನೆ ಈನುವಾಗ ಪಕ್ಕದಲ್ಲಿ ಇನ್ನೊಂದು ಹೆಣ್ಣಾನೆ ಅದಕ್ಕೆ ಸಹಾಯವಾಗಿ ನಿಂತಿರುತ್ತದೆ. ಆಫ್ರಿಕದ ಆನೆಗಳು ಐವತ್ತು ವರ್ಷಗಳವರೆಗೂ, ಇಂಡಿಯಾದ ಆನೆಗಳು ಎಪ್ಪತ್ತು ವರ್ಷಗಳ ಮೇಲೂ ಜೀವಿಸುತ್ತವೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





M. Natarajan — G. Prabhakar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜುಲೈ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಮೇ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ನಿಂಬೆಯಂತಹ ಹಗುರು ಅಭ್ಯಾಸದಿಂದ,

ಎರಡನೇ ಫೋಟೋ : ಚೊಂಬಿನ ಮೇಲೆ ಚೊಂಬುಗಳೇರಿದುವು !

ಕಳುಹಿಸಿದವರು : ಜೆ ಲಕ್ಷ್ಮೀಕೃಷ್ಣಾ, ಟೈಪಿಸ್ಟ್, ಬೆಂಗಳೂರು-೫೬

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಶೇಕಡ ಎಪ್ಪತ್ತೊಂದು. ೨. ಬುಧ ಗ್ರಹ. ೩. ಪ್ಲೂಟೋ. ೪. ಗುರು ಗ್ರಹ. ೫. ಸುಮಾರು ೭,೯೦೦ ಮೈಲು.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.